CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜುಲೈ ೮, ೨೦೦೪ (ಆಷಾಢ ೧೭, ಶಕ ವರ್ಷ ೧೯೨೬) | ಸಂಚಿಕೆ ೨೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎಲ್. ರಂಗಪ್ಪ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಲ್ಲಾ ಪಂಚಾಯತ್) ಕೊಪ್ಪ, ಶ್ರೀ ವೆಂಕಟಪ್ಪ, ತೋಟಗಾರಿಕೆ ಸಹಾಯಕರು ಹಾಗೂ ಶ್ರೀ ಪುಟ್ಟಸ್ವಾಮಿ, ತೋಟಗಾರಿಕೆ ಸಹಾಯಕರು ಇವರುಗಳ ವಿರುದ್ಧದ ಶಿಸ್ತುಕ್ರಮಗಳ ಬಗ್ಗೆ.

**ಓದಲಾಗಿದೆ:**
1) ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ; ತೋಇ:ಆ:ಸಿ:ವಿನಿ10-2:106:2001-02, ದಿನಾಂಕ: 23/27.6.2003.
2) ಸರ್ಕಾರದ ಕಾರಣ ಕೇಳುವ ಸಂಖ್ಯೆ: ಕೃತೋಇ 244 ತೋಸೇಪ 2003, ದಿನಾಂಕ: 11.8.2003.
3) ಶ್ರೀ ರಂಗಪ್ಪ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ಜಿಪಂ) ರವರ ಸ್ವೀಕೃತಿ:ಲಿಖಿತ ಹೇಳಿಕೆ ದಿನಾಂಕ: 19.11.2003.
4) ಶ್ರೀ ವೆಂಕಟಪ್ಪ, ತೋ.ಸ. ರವರ ಸ್ವೀಕೃತಿ:ಲಿಖಿತ ಹೇಳಿಕೆ, ದಿನಾಂಕ: 1.9.2003.
5) ಶ್ರೀ ಪುಟ್ಟಸ್ವಾಮಿ, ತೋ.ಸ. ರವರ ಸ್ವೀಕೃತಿ:ಲಿಖಿತ ಹೇಳಿಕೆ ದಿನಾಂಕ: 10.11.2003.

**ಪ್ರಸ್ತಾವನೆ:**

ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾವ) ಸೊರಬ ವ್ಯಾಪ್ತಿಯಡಿ ಬರುವ ಕೊಡಕಣಿ ತೋಟಗಾರಿಕೆ ಕ್ಷೇತ್ರದಲ್ಲಿ 1999-2000ನೇ ಸಾಲಿನ ಎಸ್-27 ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಬೇಕಾದ ವಿವಿಧ ಕಸಿಗಳ ದಾಸ್ತಾನು ಶಿಲ್ಕು ಕಡಿಮೆಯಾಗಿ, ಸರ್ಕಾರಕ್ಕೆ ನಷ್ಟ ಉಂಟಾಗಲು ಕಾರಣರಾಗಿರುತ್ತಾರೆಂಬ ಆರೋಪದ ಮೇಲೆ ಈ ಕೆಳಕಂಡ ಅಧಿಕಾರಿ/ನೌಕರರ ಮೇಲೆ, ಶಿಸ್ತುಕ್ರಮ ಜರುಗಿಸುವಂತೆ ಮೇಲೆ ಕ್ರಮಾಂಕ (1) ರಲ್ಲಿ ಓದಲಾಗಿರುವ ದಿನಾಂಕ: 23/27.6.2003 ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಪ್ರಸ್ತಾಪಿಸಿರುತ್ತಾರೆ.

1. ಶ್ರೀ ಎಲ್. ರಂಗಪ್ಪ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಹಿಂದಿನ) ಸತೋನಿ (ರಾವ) ಸೊರಬ.
2. ಶ್ರೀ ವೆಂಕಟಪ್ಪ, ತೋಟಗಾರಿಕೆ ಸಹಾಯಕರು
3. ಶ್ರೀ ಪುಟ್ಟಸ್ವಾಮಿ, ತೋಟಗಾರಿಕೆ ಸಹಾಯಕರು.

ಕ್ರಮಾಂಕ 2 ರಲ್ಲಿ ಓದಲಾಗಿರುವ ದಿನಾಂಕ: 11.8.2003 ರ ಸರ್ಕಾರಿ ಕಾರಣ ಕೇಳುವ ಪತ್ರದಲ್ಲಿ ಮೇಲ್ಕಂಡ ಅಧಿಕಾರಿಗಳ/ನೌಕರರ ಮೇಲಿನ ಸದರಿ ಆರೋಪಗಳಿಗೆ ಸಂಬಂಧಿಸಿದಂತೆ ಆಪಾದನಾ ಪಟ್ಟಿಯನ್ನು ಜಾರಿಮಾಡಲಾಗಿದ್ದು, ಕ್ರಮಾಂಕ (3) ರಿಂದ (5) ರಲ್ಲಿ ಓದಲಾಗಿರುವ ಪತ್ರಗಳಲ್ಲಿ ಅವರುಗಳು ತಮ್ಮ ಮೇಲಿನ ಆಪಾದನೆಗಳ ಬಗ್ಗೆ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಆರೋಪಗಳನ್ನು ತಳ್ಳಿಹಾಕಿರುತ್ತಾರೆ. ಅವರ ಹೇಳಿಕೆಗಳನ್ನು ಪರಿಶೀಲಿಸಲಾಗಿ ತೃಪ್ತಿಕರವಾಗಿರುವುದಿಲ್ಲ. ಆದ್ದರಿಂದ ಪ್ರಕರಣವನ್ನು ಇಲಾಖಾ ವಿಚಾರಣೆಗೊಳಿಸಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ತೀರ್ಮಾನಿಸಿದೆ. ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 244 ತೋಸೇಪ 2004, ಬೆಂಗಳೂರು, ದಿನಾಂಕ: 5ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾವ) ಸೊರಬ ವ್ಯಾಪ್ತಿಯಡಿ ಬರುವ ಕೊಡಕಣಿ ತೋಟಗಾರಿಕೆ ಕ್ಷೇತ್ರದಲ್ಲಿ 1999-2000 ನೇ ಸಾಲಿನ ಎಸ್-27 ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಬೇಕಾದ ವಿವಿಧ ಕಸಿಗಳ ದಾಸ್ತಾನು ಶಿಲ್ಕು ಕಡಿಮೆಯಾಗಿ, ಸರ್ಕಾರದ ಹಣ ನಷ್ಟವಾಗಲು ಕಾರಣರಾಗಿರುವ ಈ ಕೆಳಕಂಡ ಅಧಿಕಾರಿ/ನೌಕರರ ಮೇಲೆ, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 13ನ್ನು ಓದುವುದರೊಂದಿಗೆ ಅದೇ ನಿಯಮ 11 ರಡಿ ಇಲಾಖಾ ವಿಚಾರಣೆ ನಡೆಸಲು, ಶ್ರೀ ಪಿ.ಸಿ. ದಯಾಪರಶಿವಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ವ್ಯವಸ್ಥಾಪಕರು, ಅಪರ ನಿರ್ದೇಶಕರ ಕಛೇರಿ, ಬೆಳೆಗಳ ನಿರ್ವಹಣೆ, ಲಾಲ್‌ಬಾಗ್, ಬೆಂಗಳೂರುರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

1. ಶ್ರೀ ಎಲ್. ರಂಗಪ್ಪ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಹಿಂದಿನ ಸತೋನಿ (ರಾವ)) ಸೊರಬ.
2. ಶ್ರೀ ವೆಂಕಟಪ್ಪ, ತೋಟಗಾರಿಕೆ ಸಹಾಯಕರು.
3. ಶ್ರೀ ಪುಟ್ಟಸ್ವಾಮಿ, ತೋಟಗಾರಿಕೆ ಸಹಾಯಕರು.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಚೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೆಯೇ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ / ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ರೂ. 6,000/- (ರೂ. ಆರು ಸಾವಿರ ಮಾತ್ರ) ಗಳ ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು, ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು 3 ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 616

**ಎನ್. ಮಂಜುಳಗೀತ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಮಾತಂಇ 26 ಇಸಂಸೇ 2003, ಬೆಂಗಳೂರು, ದಿನಾಂಕ: 3ನೇ ಜೂನ್ 2004**

ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾದ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಅನ್ವಯ ಸರಕಾರದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಜೂನಿಯರ್ ಪ್ರೋಗ್ರಾಮರ್‌ಗಳ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಮಾಡಿ ಕಳುಹಿಸಿರುವ ಮೂಲ ಪಟ್ಟಿಯಲ್ಲಿ ಈ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ನಿರ್ದೇಶನಾಲಯದಲ್ಲಿ ರೂ. 6000-11200 ಶ್ರೇಣಿಯಲ್ಲಿ ಜೂನಿಯರ್ ಪ್ರೋಗ್ರಾಮರ್ ಆಗಿ ಎರಡು ವರ್ಷಗಳ ಪರೀಕ್ಷಾರ್ಥಿಯಾಗಿ, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕ ಮಾಡಲಾಗಿದೆ.

01. ಉಮಾರಾಣಿ, ಡಿ.ಎಸ್.
ನಂ. 527, 2ನೇ ಎ-ಅಡ್ಡರಸ್ತೆ, 3ನೇ ಹಂತ, 3ನೇ ಬ್ಲಾಕ್, ಡಬ್ಲ್ಯೂ.ಸಿ.ಆರ್ ಬಸವೇಶ್ವರನಗರ,
ಬೆಂಗಳೂರು-560 079.

02. ಮಂಗಳಾದೇವಿ ಕೆ.ಟಿ.
ನಂ. 34, 1ನೇ ಮುಖ್ಯ ರಸ್ತೆ, 3ನೇ ಹಂತ, 4ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು-560 079.

03. ಧನರಾಜ್
ಮನೆ ನಂ. 95, ಎಫ್/1, ಪ್ರಶಾಂತ ನಿಲಯ, ಎಂ.ಇ.ಎಸ್. ಕಾಲೋನಿ, ಕೊನೇನ ಅಗ್ರಹಾರ,
ವಿಮಾನಪುರ, ಬೆಂಗಳೂರು-560 017.

**ಷರತ್ತು ಮತ್ತು ನಿಬಂಧನೆಗಳು**

1. ಮೇಲ್ಕಂಡ ಅಭ್ಯರ್ಥಿಗಳ ನೇಮಕಾತಿಯು ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಿವಿಲ್ ಸಂಖ್ಯೆ 232/99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.
2. ಮೇಲ್ಕಂಡ ಅಭ್ಯರ್ಥಿಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ, ಸೇವಾ ಜೇಷ್ಠತಾ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಾವಳಿಗಳ ಅಥವಾ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
3. ಸದರಿ ಅಭ್ಯರ್ಥಿಗಳು 1977ರ ಕರ್ನಾಟಕ ನಾಗರೀಕ ಸೇವೆಗಳು (ಪರೀಕ್ಷಾರ್ಥ) ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
4. ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು 1974ರ ಕರ್ನಾಟಕ ನಾಗರೀಕ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿಗಳಲ್ಲಿ, ಮೇಲ್ಕಂಡ ಹುದ್ದೆಗೆ ನಿಗದಿಪಡಿಸಿರುವ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು ಅಥವಾ ವಿನಾಯ್ತಿ ಪಡೆಯತಕ್ಕದ್ದು.

5. ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅವರ ಜನ್ಮ ದಿನಾಂಕ, ವಿದ್ಯಾರ್ಹತೆ, ಮೀಸಲಾತಿ ಪ್ರಮಾಣ ಪತ್ರ ಮತ್ತು ಇತರ ಮೂಲ ದಾಖಲೆಗಳನ್ನು ಪರಿಶೋಧನೆಗಾಗಿ ಹಾಜರುಪಡಿಸತಕ್ಕದ್ದು.
6. ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 18ರ ರೀತ್ಯಾ ನೇಮಕಾತಿ ಆದೇಶ ಹೊರಡಿಸಿದ 15 ದಿನಗಳ ಒಳಗಾಗಿ ಅಭ್ಯರ್ಥಿಗಳು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಯು.ಎನ್.ಐ. ಕಟ್ಟಡ, ಮಿಲ್ಲರ್ ಟ್ಯಾಂಕ್ ಬೆಡ್, ತಿಮ್ಮಯ್ಯ ರಸ್ತೆ, ಬೆಂಗಳೂರು-560 052, ಇವರ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 621

**ಕೆ.ಎಂ. ಆನಂದ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ.

## ಅಧಿಸೂಚನೆ

**ಸಂಖ್ಯೆ: ಮಾತಂಇ 28 ಇಸಂಸೇ 2003, ಬೆಂಗಳೂರು, ದಿನಾಂಕ: 3ನೇ ಜೂನ್ 2004**

ಕರ್ನಾಟಕ ರಾಜ್ಯ ನಾಗರೀಕ ಸೇವಾ (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾದ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001ರ ಅನ್ವಯ ಸರಕಾರದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದಲ್ಲಿ ಪ್ರೋಗ್ರಾಮಿಂಗ್ ಅಸಿಸ್ಟೆಂಟ್‌ಗಳ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿಮಾಡುವ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಮಾಡಿ ಕಳುಹಿಸಿರುವ ಮೂಲ ಪಟ್ಟಿಯಲ್ಲಿನ ಈ ಕೆಳಕಂಡ ಅಭ್ಯರ್ಥಿಗಳನ್ನು ಸದರಿ ನಿರ್ದೇಶನಾಲಯದಲ್ಲಿ ರೂ. 5575-10620 ಶ್ರೇಣಿಯಲ್ಲಿ ಪ್ರೋಗ್ರಾಮಿಂಗ್ ಅಸಿಸ್ಟೆಂಟ್ ಆಗಿ ಎರಡು ವರ್ಷಗಳ ಪರೀಕ್ಷಾರ್ಥಿಯಾಗಿ, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ನೇಮಕ ಮಾಡಲಾಗಿದೆ.

01. ಶ್ರೀ ರವಿಕುಮಾರ್. ಕೆ.
ಸನ್ ಆಫ್ ಲೇಟ್ ಕರಿರಂಗಪ್ಪ, ಮಾರುತಿ ನಗರ, ಅರಸಿಕೆರೆ, ಹಾಸನ ಜಿಲ್ಲೆ-573 103
02. ಶ್ರೀಮತಿ ಶೋಭ. ಎಸ್.
ಡಾಟರ್ ಆಫ್ ಡಿ. ಸೋಮಪ್ಪ (ನಿವೃತ್ತಿ ಮುಖ್ಯ ಉಪಾಧ್ಯಾಯರು) ಹೊಸಮನೆ, 1ನೇ ಅಡ್ಡರಸ್ತೆ, ಜೈಲ್ ರಸ್ತೆ, ಶ್ರೀಕಾರ್ತಿಕ್ ಔಟ್ ಹೌಸ್ ಎದುರು, ಶಿವಮೊಗ್ಗ-577 201
03. ಶ್ರೀ ತಿಪ್ಪೇಸ್ವಾಮಿ. ಎಂ.
ಸನ್ ಆಫ್ ಮಾರಣ್ಣ, ಅಮೀರರ (ಪೋಸ್ಟ್ ಮ್ಯಾನ್) ಮನೆ ಹತ್ತಿರ ಜನತಾ ಕಾಲೋನಿ, ಗಾಂಧಿನಗರ, ಚಳ್ಳಕೆರೆ - 577 522, ಚಿತ್ರದುರ್ಗ ಜಿಲ್ಲೆ
04. ಶ್ರೀಮತಿ ಶೋಭ. ಬಿ.
ನಂ. 8, ಎಂ-418, 1ನೇ ಬ್ಲಾಕ್, ಕಲ್ಯಾಣ ನಗರ, 8ನೇ ಮುಖ್ಯ ರಸ್ತೆ, ಬೆಂಗಳೂರು-560 043

**ಷರತ್ತು ಮತ್ತು ನಿಬಂಧನೆಗಳು**

1. ಮೇಲ್ಕಂಡ ಅಭ್ಯರ್ಥಿಗಳ ನೇಮಕಾತಿಯು ಮಹಿಳಾ ಮೀಸಲಾತಿ ಕುರಿತಂತೆ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಿವಿಲ್ ಸಂಖ್ಯೆ 232/99ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.
2. ಮೇಲ್ಕಂಡ ಅಭ್ಯರ್ಥಿಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ, ಸೇವಾ ಜೇಷ್ಠತಾ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮಾವಳಿಗಳ ಅಥವಾ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
3. ಸದರಿ ಅಭ್ಯರ್ಥಿಗಳು 1977ರ ಕರ್ನಾಟಕ ನಾಗರೀಕ ಸೇವೆಗಳು (ಪರೀಕ್ಷಾರ್ಥ) ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
4. ಪರಿಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಗಳು 1974ರ ಕರ್ನಾಟಕ ನಾಗರೀಕ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಾವಳಿಗಳಲ್ಲಿ, ಮೇಲ್ಕಂಡ ಹುದ್ದೆಗೆ ನಿಗದಿಪಡಿಸಿರುವ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗತಕ್ಕದ್ದು ಅಥವಾ ವಿನಾಯ್ತಿ ಪಡೆಯತಕ್ಕದ್ದು.
5. ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅವರ ಜನ್ಮ ದಿನಾಂಕ, ವಿದ್ಯಾರ್ಹತೆ, ಮೀಸಲಾತಿ ಪ್ರಮಾಣ ಪತ್ರ ಮತ್ತು ಇತರ ಮೂಲ ದಾಖಲೆಗಳನ್ನು ಪರಿಶೋಧನೆಗಾಗಿ ಹಾಜರುಪಡಿಸತಕ್ಕದ್ದು.
6. ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 18ರ ರೀತ್ಯಾ ನೇಮಕಾತಿ ಆದೇಶ ಹೊರಡಿಸಿದ 15 ದಿನಗಳ ಒಳಗಾಗಿ ಅಭ್ಯರ್ಥಿಗಳು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಯು.ಎನ್.ಐ. ಕಟ್ಟಡ, ಮಿಲ್ಲರ್ ಟ್ಯಾಂಕ್ ಬೆಡ್, ತಿಮ್ಮಯ್ಯ ರಸ್ತೆ, ಬೆಂಗಳೂರು-560 052, ಇವರ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 622

**ಕೆ.ಎಂ. ಆನಂದ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 11 ಎಸ್‌ಜಿಬಿ 2000, ದಿನಾಂಕ: 14.3.2000.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 11 ಸಆಸೇ 2000, ದಿನಾಂಕ: 29.7.2000.
3) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 7 ಸಸಿವಿ 2001, ದಿನಾಂಕ: 20.3.2001.
4) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2002, ದಿನಾಂಕ: 6.4.2002.
5) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 244 ಸಆಸೇ 2001, ದಿನಾಂಕ: 23.4.2002.
6) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 244 ಸಆಸೇ 2001, ದಿನಾಂಕ: 12.8.2002.
7) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 244 ಸಆಸೇ 2001, ದಿನಾಂಕ: 30.10.2002.
8) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 1190 ಲೆಪ-ಐಆರ್‌ಎಲ್‌ಎ 2004, ದಿನಾಂಕ: 29.4.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 14.3.2000 ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವಾ ಅಧಿಕಾರಿಗಳು, ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳು ಹಾಗೂ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ವೇತನ ಪಾವತಿ ಹಾಗೂ ಇತರ ವ್ಯಕ್ತಿಗತ ಕ್ಲೇಮುಗಳ ಪರಿಶೀಲನೆ : ಪಾವತಿ ಸಲುವಾಗಿ ಈ ಕೆಳಕಂಡ ಅಧಿಕಾರಿ ಸಿಬ್ಬಂದಿಗಳನ್ನೊಳಗೊಂಡಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2 | ಶಾಖಾಧಿಕಾರಿ | 1 |
| 3 | ಸಹಾಯಕ | 2 |
| 4 | ಅಕೌಂಟ್ಸ್ ಅಸಿಸ್ಟೆಂಟ್ | 1 |
| 5 | ಶೀಘ್ರಲಿಪಿಗಾರ | 1 |
| 6 | ಕ್ಯಾಷಿಯರ್ | 1 |
| 7 | ತಾಂತ್ರಿಕ ಸಹಾಯಕರು | 1 |
| 8 | ಕಿರಿಯ ಸಹಾಯಕ | 1 |
| 9 | ದಲಾಯತ್ | 1 |
| | **ಒಟ್ಟು** | **10** |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 29.7.2000 ದ ಸರ್ಕಾರದ ಆದೇಶದಲ್ಲಿ ಅಕೌಂಟ್ಸ್ ಅಸಿಸ್ಟೆಂಟ್ ಹುದ್ದೆಯನ್ನು ಅಕೌಂಟ್ಸ್ ಸೂಪರಿಂಟೆಂಡೆಂಟ್ ಹುದ್ದೆಗೆ ಉನ್ನತೀಕರಿಸಲಾಗಿದೆ ಹಾಗೂ ಎರಡು ಸಹಾಯಕ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಸಹಾಯಕ ಹುದ್ದೆಗೆ ಉನ್ನತೀಕರಿಸಲಾಗಿದೆ.

ಕ್ರಮ ಸಂಖ್ಯೆ (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಈ ಹುದ್ದೆಗಳನ್ನು ದಿನಾಂಕ: 13.3.2003 ರವರೆಗೆ ವಿಸ್ತರಿಸಲಾಗಿರುತ್ತದೆ. ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 23.4.2002 ರ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಅಧಿಕ ಹುದ್ದೆಗಳನ್ನು ಸೃಜಿಸಲಾಗಿದೆ.

| | | |
|---|---|---|
| 1 | ಡಾಟಾ ಎಂಟ್ರಿ ಆಪರೇಟರ್ | 1 |
| 2 | ಸಹಾಯಕ | 1 |
| 3 | ಬೆರಳಚ್ಚುಗಾರ | 1 |
| | **ಒಟ್ಟು** | **3** |

ಹಾಗೂ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 12.8.2002 ರ ಸರ್ಕಾರಿ ಆದೇಶದಲ್ಲಿ ಒಂದು ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಅಲ್ಲದೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ: 30.10.2002 ರ ಸರ್ಕಾರಿ ಆದೇಶದಲ್ಲಿ ಒಂದು ವೇತನ ಶ್ರೇಣಿ ರಹಿತ ತಾಂತ್ರಿಕ ಸಹಾಯಕರ ಹುದ್ದೆಯನ್ನು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆ ಎಂದು ಮರುಪದನಾಮೀಕರಿಸಲಾಗಿರುತ್ತದೆ.

ಪ್ರಸ್ತುತ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಇವರು ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ: 29.4.2004ರ ಅನಧಿಕೃತ ಟಿಪ್ಪಣಿಯಲ್ಲಿ ಐಆರ್‌ಎಲ್‌ಎ ಶಾಖೆಯ ಹುದ್ದೆಗಳನ್ನು ದಿನಾಂಕ: 14.3.2003 ರಿಂದ 13.3.2005 ರವರೆಗೆ ಮುಂದುವರೆಸಲು ಕ್ರಮಕೈಗೊಳ್ಳುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 58 ಸಸಿವಿ 2003, ಬೆಂಗಳೂರು, ದಿನಾಂಕ: 24ನೇ ಮೇ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 14.3.2003 ರಿಂದ 13.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ - ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1 | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2 | ಶಾಖಾಧಿಕಾರಿ | 1 |
| 3 | ತಾಂತ್ರಿಕ ಸಹಾಯಕರು - ವಿಶೇಷಾಧಿಕಾರಿ (ವೇತನ ಶ್ರೇಣಿ ರಹಿತ) | 1 |
| 4 | ಹಿರಿಯ ಸಹಾಯಕರು | 1 |
| 5 | ಕ್ಯಾಷಿಯರ್ | 1 |
| 6 | ಅಕೌಂಟ್ಸ್ ಸೂಪರಿಂಟೆಂಡೆಂಟ್ | 1 |
| 7 | ಶೀಘ್ರಲಿಪಿಗಾರ | 1 |
| 8 | ಸಹಾಯಕರು | 3 |
| 9 | ಡಾಟಾ ಎಂಟ್ರಿ ಆಪರೇಟರ್ | 1 |
| 10 | ಕಿರಿಯ ಸಹಾಯಕ | 1 |
| 11 | ಬೆರಳಚ್ಚುಗಾರರು | 1 |
| 12 | ದಲಾಯತ್ (ದಲಾಯತ್-1 + ಆಫೀಸ್ ಆರ್ಡರ್ಲಿ-1) | 2 |
| | **ಒಟ್ಟು** | **15** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 625

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಲೋಕೋಪಯೋಗಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 47 ಸಸಿವಿ 2002, ದಿನಾಂಕ: 26.7.2002.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 26.7.2002 ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 4.7.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ನಿರ್ಮ್ಮೀಕರಿಸಲಾಗಿರುತ್ತದೆ. ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ನಿಗದಿಪಡಿಸಲಾಗಿರುತ್ತದೆ.

| | | |
|---|---|---|
| 1 | ಆಪ್ತ ಕಾರ್ಯದರ್ಶಿ ಗ್ರೇಡ್-2 : ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2 | ಪತ್ರಾಂಕಿತ ಆಪ್ತ ಸಹಾಯಕ : ಹಿರಿಯ ಶೀಘ್ರಲಿಪಿಗಾರ | 2 ಹುದ್ದೆಗಳು |
| 3 | ಸಹಾಯಕ : ಕಿರಿಯ ಸಹಾಯಕ | 1 ಹುದ್ದೆ |
| 4 | ದಲಾಯತ್ | 2 ಹುದ್ದೆಗಳು |

ಪ್ರಸ್ತುತ ಈ ಹುದ್ದೆಗಳ ಒಂದು ವರ್ಷದ ಕಾಲಾವಧಿಯು ದಿನಾಂಕ: 3.7.2003 ಕ್ಕೆ ಮುಕ್ತಾಯಗೊಂಡಿರುತ್ತದೆ. ಆದುದರಿಂದ ಈ ಹುದ್ದೆಗಳನ್ನು ದಿನಾಂಕ: 4.7.2003 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 2004, ಬೆಂಗಳೂರು, ದಿನಾಂಕ: 18ನೇ ಮೇ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 4.7.2003 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ದಿನಾಂಕ: 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 626

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 196 ಎಸ್ಎಎಸ್ 2004, ದಿನಾಂಕ: 28.4.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 28.4.2004 ರ ಅಧಿಸೂಚನೆಯಲ್ಲಿ ಶ್ರೀ ಎಂ.ಜಿ. ಹಾಲಪ್ಪನವರ್, ಐ.ಎ.ಎಸ್. ಇವರನ್ನು ಕೃಷಿ ಮತ್ತು ತೋಟಗಾರಿಕೆ ಇಲಾಖೆಯಲ್ಲಿ ನಿಮ್ನೀಕರಿಸಲಾದ ಸರ್ಕಾರದ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಈ ಕಾರಣದಿಂದಾಗಿ ಪ್ರಸ್ತುತ ಕೃಷಿ ಮತ್ತು ತೋಟಗಾರಿಕೆ ಇಲಾಖೆಯಲ್ಲಿ ಅಸ್ತಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆ ಎಂದು ನಿಮ್ನೀಕರಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 2004, ಬೆಂಗಳೂರು, ದಿನಾಂಕ: 22ನೇ ಮೇ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಕೃಷಿ ಮತ್ತು ತೋಟಗಾರಿಕೆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ, (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಹುದ್ದೆಯನ್ನು ಶ್ರೀ ಎಂ.ಜಿ. ಹಾಲಪ್ಪನವರ್, ಐ.ಎ.ಎಸ್. ಇವರು ಕಾರ್ಯ ವರದಿ ಮಾಡಿಕೊಂಡ ದಿನಾಂಕ: 29.4.2004 ರಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ: 31.3.2005 ರವರೆಗೆ ಅಥವಾ ಮುಂದಿನ ಆದೇಶದವರೆಗೆ 'ಸರ್ಕಾರದ ಕಾರ್ಯದರ್ಶಿ (ಆಹಾರ ಸಂಸ್ಕರಣೆ ಮತ್ತು ಕಟಾವು ತಂತ್ರಜ್ಞಾನ) ಕೃಷಿ ಮತ್ತು ತೋಟಗಾರಿಕೆ ಇಲಾಖೆ ಹುದ್ದೆ' ಎಂದು ನಿಮ್ನೀಕರಿಸಲಾಗಿದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001 ರಲ್ಲಿ ಕಾರ್ಯದರ್ಶಿಗಳ ಆಪ್ತ ಶಾಖೆಗೆ ನಿಗದಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 627 **ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, ಇವರ ಪದನಾಮವನ್ನು ಸೂಕ್ತವಾಗಿ ಮಾರ್ಪಾಡು ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಕಾರ್ಯದರ್ಶಿಯವರ ಟಿಪ್ಪಣಿ ದಿನಾಂಕ: 15.5.2004.

**ಪ್ರಸ್ತಾವನೆ:**

ಒಳಾಡಳಿತ ಮತ್ತು ಸಾರಿಗೆ ಇಲಾಖೆಯಲ್ಲಿ ಪ್ರಸಕ್ತ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ, (ಒಳಾಡಳಿತ ಮತ್ತು ಸಾರಿಗೆ) ಹಾಗೂ ಪ್ರಧಾನ ಕಾರ್ಯದರ್ಶಿ, (ಸಾರಿಗೆ) ಹೀಗೆ 2 ಪ್ರತ್ಯೇಕ ಹುದ್ದೆಗಳು ಅಸ್ತಿತ್ವದಲ್ಲಿವೆ. ಪ್ರಧಾನ ಕಾರ್ಯದರ್ಶಿ (ಸಾರಿಗೆ), ಇವರು ಮೋಟಾರು ವಾಹನಗಳಿಗೆ ಸಂಬಂಧಿಸಿದ ವಿಷಯಗಳನ್ನು ಸ್ವತಂತ್ರವಾಗಿ ನಿರ್ವಹಿಸಿ ಸಂಬಂಧಪಟ್ಟ ಸಚಿವರ ಅಧಿಕಾರ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಪ್ರಧಾನ ಕಾರ್ಯದರ್ಶಿ (ಒಳಾಡಳಿತ ಮತ್ತು ಸಾರಿಗೆ) ಇವರ ಪದನಾಮವನ್ನು ಸೂಕ್ತವಾಗಿ ಮಾರ್ಪಡಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಸಸಿವಿ 2004, ಬೆಂಗಳೂರು, ದಿನಾಂಕ: 27ನೇ ಮೇ 2004**

ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ (ಒಳಾಡಳಿತ ಮತ್ತು ಸಾರಿಗೆ) ಇವರ ಪದನಾಮವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ (ಒಳಾಡಳಿತ) ಎಂದು ಮರುಪದನಾಮೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 628 **ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ರಾಜ್ಯದ ಗ್ರಾಮ ಪಂಚಾಯತಿಗಳಿಗೆ 2004-05ನೇ ಸಾಲಿನಲ್ಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸುತ್ತೋಲೆ ಸಂಖ್ಯೆ: ಗ್ರಾಅಪ : 129 : ಗ್ರಾಪಂಅ : 2002 (3) ದಿನಾಂಕ: 17.9.2002.

2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ : 129 : ಗ್ರಾಪಂಕ: 2002, ದಿನಾಂಕ: 2.12.2003.

3) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಆಇ:8 ಜಿಪ:2004, ಭಾಗ(2) ದಿ: 25.5.2004.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (3) ರಲ್ಲಿ ಆರ್ಥಿಕ ಇಲಾಖೆಯು, 2004-05ನೇ ಸಾಲಿಗೆ ಲೆಕ್ಕಶೀರ್ಷಿಕೆ 2515-00-198-1-07 (ಯೋಜನೆ) ಯಡಿಯಲ್ಲಿ ಒದಗಿಸಲಾಗಿರುವ ರೂ. 28,265.00 ಲಕ್ಷಗಳ ಅನುದಾನದಲ್ಲಿ, ಪ್ರಸ್ತುತ ಸಾಲಿನ ಎರಡು ತಿಂಗಳ ಅನುದಾನದ

ಬಾಬ್ತು ರೂ. 4710.00 ಲಕ್ಷ (ನಾಲ್ಕು ಸಾವಿರದ ಏಳುನೂರ ಹತ್ತು ಲಕ್ಷ ರೂ.ಗಳನ್ನು) ಬಿಡುಗಡೆ ಮಾಡಿರುತ್ತದೆ. ಈ ಮೊತ್ತವನ್ನು ರಾಜ್ಯದ 5653 ಗ್ರಾಮ ಪಂಚಾಯತಿಗಳಿಗೆ ಸಮನಾಗಿ ಅವುಗಳ ಬ್ಯಾಂಕು ಖಾತೆ ಮುಖಾಂತರ ಬಿಡುಗಡೆ ಮಾಡುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 232 ಗ್ರಾಪಂಅ 2004, ಬೆಂಗಳೂರು, ದಿನಾಂಕ: 10ನೇ ಜೂನ್ 2004**

ರಾಜ್ಯದ ಗ್ರಾಮ ಪಂಚಾಯತಿಗಳಿಗೆ 2004-05ನೇ ಸಾಲಿನ ಮೊದಲ ಎರಡು ತಿಂಗಳ ಅನುದಾನದ ಬಾಬ್ತು ರೂ. 4710 ಲಕ್ಷ (ನಾಲ್ಕು ಸಾವಿರದ ಏಳುನೂರು ಹತ್ತು ಲಕ್ಷ ರೂ.ಗಳನ್ನು) ಲೆಕ್ಕ ಶೀರ್ಷಿಕೆ 2515-00-198-1-07 (ಯೋಜನೆ) ಯಡಿಯಿಂದ ಬಿಡುಗಡೆ ಮಾಡಲು ಹಾಗೂ ಈ ಅನುದಾನದ ಮೊತ್ತವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯೀಸ್ ರಸೀತಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ರಾಜದೂತ್ ಕಾಂಪ್ಲೆಕ್ಸ್ ಒಂದನೇ ಮಹಡಿ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಸಮನಾಗಿ ಲಭ್ಯವಾಗುವ ಮೊತ್ತ ರೂ. 83,000.00 (ಎಂಬತ್ಮೂರು ಸಾವಿರ ರೂ.ಗಳು ಮಾತ್ರ) ಗ್ರಾಮ ಪಂಚಾಯ್ತಿಗಳ ಸ್ಥಳೀಯ ಬ್ಯಾಂಕ್ ಖಾತೆಗೆ ಜಮೆ ಮಾಡಲು ಆದೇಶಿಸಲಾಗಿದೆ.

ಈ ಆದೇಶಕ್ಕೆ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಗ್ರಾಅಪ 1021 ಪಿ.ಬಿ.ಎಸ್. 2004, ದಿನಾಂಕ: 24.5.2004 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 629

**ಕೆ.ಎಸ್. ಶಾಮಸುಂದರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಪಿಡಿಎಸ್ 51 ಎಸ್‌ಎಸ್‌ಎಂ 2003, ಬೆಂಗಳೂರು, ದಿನಾಂಕ: 4ನೇ ಜೂನ್ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಿಎಸ್ 70 ಎಸ್‌ಎಸ್‌ಎಂ 2000, ದಿನಾಂಕ: 23.12.2000 ರಲ್ಲಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಸೇವೆಗೆ ಸೇರಿದ 44 ಸಹಾಯಕ ನಿರ್ದೇಶಕರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರ ಮೇರೆಗೆ ಉಪನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿತ್ತು. ಹಾಗೂ ಇದೇ ಸಮ ಸಂಖ್ಯೆಯ ದಿನಾಂಕ: 1.8.2002 ರಲ್ಲಿ ಶ್ರೀ ಎನ್. ಮಾಧುರಾಂ, ಸಹಾಯಕ ನಿರ್ದೇಶಕರು ಇವರಿಗೆ ದಿನಾಂಕ: 23.12.2000 ರಿಂದಲೇ ಪೂರ್ವಾನ್ವಯವಾಗಿ ಉಪನಿರ್ದೇಶಕರ ಹುದ್ದೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಂತೆ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿತ್ತು. ದಿನಾಂಕ: 23.12.2000 ಅಧಿಸೂಚನೆಯಲ್ಲಿನ ಕ್ರಮ ಸಂಖ್ಯೆ 1 ರಲ್ಲಿರುವ ಶ್ರೀ ಜಿ. ಸರ್ದಾರ್‌ಖಾನ್‌ರವರು ನಿಯಮ 32 ರಡಿ ನೀಡಿರುವ ಸ್ವತಂತ್ರ ಪ್ರಭಾರದ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗದೇ ಇರುವುದರಿಂದ, ಅವರನ್ನು ಹೊರತುಪಡಿಸಿ, ಉಳಿದ 44 ಜನ ಸಹಾಯಕ ನಿರ್ದೇಶಕರುಗಳನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಂತೆ ಉಪನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ್ದನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಿಎಸ್ 28 ಎಸ್‌ಎಸ್‌ಎಂ 2001, ದಿನಾಂಕ: 27.8.2002 ರಲ್ಲಿ ಸ್ಥಾನಪನ್ನ ಮುಂಬಡ್ತಿ ನೀಡಿ ಆದೇಶ ಹೊರಡಿಸಲಾಗಿರುತ್ತದೆ.

ದಿನಾಂಕ: 30.10.2001 ರಂದು ನಡೆದ ಇಲಾಖಾ ಬಡ್ತಿ ಸಮಿತಿ ಸಭೆಯಲ್ಲಿ 4 ಜನ ಸಹಾಯಕ ನಿರ್ದೇಶಕರುಗಳಿಗೆ ನಿಯಮ 32 ರಂತೆ ಸ್ವತಂತ್ರ ಪ್ರಭಾರದಲ್ಲಿರಿಸಲು ತೀರ್ಮಾನಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಿಎಸ್ 109 ಎಸ್‌ಎಸ್‌ಎಂ 2001, ದಿನಾಂಕ: 20.12.2001 ರಂದು 4 ಜನ ಸಹಾಯಕ ನಿರ್ದೇಶಕರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32 ರಂತೆ ಉಪನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿರುತ್ತದೆ.

ದಿನಾಂಕ: 24.12.2001 ರಂದು ನಡೆದ ಇಲಾಖಾ ಬಡ್ತಿ ಸಮಿತಿ ಸಭೆಯಲ್ಲಿ 20 ಜನ ಸಹಾಯಕ ನಿರ್ದೇಶಕರುಗಳಿಗೆ ನಿಯಮ 32 ರಂತೆ ಸ್ವತಂತ್ರ ಪ್ರಭಾರದಲ್ಲಿರಿಸಲು ತೀರ್ಮಾನಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಿಎಸ್ 127 ಎಸ್‌ಎಸ್‌ಎಂ 2001, ದಿನಾಂಕ: 28.12.2001 ರಲ್ಲಿ 12 ಜನ ಸಹಾಯಕ ನಿರ್ದೇಶಕರುಗಳಿಗೆ ಹಾಗೂ ಇದೇ ಸಮ ಸಂಖ್ಯೆಯ ದಿನಾಂಕ: 6.7.2002 ರ ಅಧಿಸೂಚನೆಯಲ್ಲಿ 7 ಜನ ಸಹಾಯಕ ನಿರ್ದೇಶಕರುಗಳಿಗೆ ಮತ್ತು ದಿನಾಂಕ: 24.2.2003 ರಲ್ಲಿ ಒಬ್ಬ ಸಹಾಯಕ ನಿರ್ದೇಶಕರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32 ರಂತೆ ಉಪನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿರುತ್ತದೆ.

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಬ್ಯಾಕ್‌ಲಾಗ್ ನಿವಾರಿಸುವ ಸಂಬಂಧವಾಗಿ ದಿನಾಂಕ: 19.6.2002 ರಂದು ನಡೆದ ಇಲಾಖಾ ಬಡ್ತಿ ಸಮಿತಿ ಸಭೆಯಲ್ಲಿ 5 ಜನ ಸಹಾಯಕ ನಿರ್ದೇಶಕರುಗಳಿಗೆ ನಿಯಮ 32 ರಂತೆ ಬಡ್ತಿ ನೀಡಲು ತೀರ್ಮಾನಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಿಎಸ್ 17 ಎಸ್‌ಎಸ್‌ಎಂ 2003, ದಿನಾಂಕ: 5.7.2002 ರಲ್ಲಿ ಒಟ್ಟು 6 ಜನ ಸಹಾಯಕ ನಿರ್ದೇಶಕರುಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಂತೆ ಉಪನಿರ್ದೇಶಕರ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಲಾಗಿರುತ್ತದೆ.

ದಿನಾಂಕ: 29.12.2001 ರ ಅಧಿಸೂಚನೆಯಲ್ಲಿ ಜೇಷ್ಠತಾ ಕ್ರಮ ಸಂಖ್ಯೆ: 351 ರಲ್ಲಿನ ಶ್ರೀ ಕೆ. ರಮೇಶ್ ಉಪಾಧ್ಯ ಇವರ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದರಿಂದ ಬಡ್ತಿಗೆ ಪರಿಗಣಿಸಿರುವುದಿಲ್ಲ. ಜೇಷ್ಠತಾ ಕ್ರಮ ಸಂಖ್ಯೆ: 410, 411,

412, 413, 416, 417, 419, 420, 421, 422, 423 ರಲ್ಲಿನ ಅಧಿಕಾರಿಗಳು ಸೇವೆಯಿಂದ ವಯೋನಿವೃತ್ತಿ ಹೊಂದಿರುತ್ತಾರೆ. ಜೇಷ್ಠತಾ ಕ್ರಮ ಸಂಖ್ಯೆ: 435, 440 ರಲ್ಲಿನ ಅಧಿಕಾರಿಗಳು ಸಹಾಯಕ ನಿರ್ದೇಶಕರ ಹುದ್ದೆಯಲ್ಲಿ ಕನಿಷ್ಟ 3 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪೂರೈಸಿರುವುದಿಲ್ಲವಾದುದರಿಂದ ಅವರುಗಳನ್ನು ಬಡ್ತಿಗೆ ಪರಿಗಣಿಸಿರುವುದಿಲ್ಲ.

ದಿನಾಂಕ: 28.7.2003 ರಲ್ಲಿ ಆರ್ಥಿಕ ಇಲಾಖೆಯು ಬ್ಯಾಕ್‌ಲಾಗ್ ಹುದ್ದೆಗಳನ್ನು ಹಾಗೂ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ ಶೇಕಡಾ 80 ರಷ್ಟು ಹುದ್ದೆಗಳನ್ನು ಖಾಲಿಯಾಗಿಯೇ ಉಳಿಸಿ, ಶೇಕಡಾ 20 ರಷ್ಟು ಹುದ್ದೆಗಳನ್ನು ಮಾತ್ರ ಸಕ್ರಮಗೊಳಿಸಲು ಸಹಮತಿಸಿರುವುದರಿಂದ ಜೇಷ್ಠತಾ ಕ್ರಮ ಸಂಖ್ಯೆ: 331, 359, 403, 407, 408 ರಲ್ಲಿನ ಅಧಿಕಾರಿಗಳನ್ನು ಹಾಗೂ ಬ್ಯಾಕ್‌ಲಾಗ್ ನಿವಾರಣೆ ಸಲುವಾಗಿ ನಿಯಮ 32 ರಂತೆ ಸ್ವತಂತ್ರ ಪ್ರಭಾರದಲ್ಲಿರಿಸಿದ ಜೇಷ್ಠತಾ ಕ್ರಮ ಸಂಖ್ಯೆ: 479, 478, 481, 482, 483, 480 ರಲ್ಲಿನ ಅಧಿಕಾರಿಗಳನ್ನು ಮಾತ್ರ ಸ್ಥಾನಪನ್ನ ಮುಂಬಡ್ತಿಗೆ ಪರಿಗಣಿಸಬಹುದಾಗಿದೆ.

ಆದುದರಿಂದ ಈ ಕೆಳಕಂಡ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಲಾಗಿರುವ 11 ಜನ ಉಪ ನಿರ್ದೇಶಕರುಗಳನ್ನು ಅವರ ಹೆಸರಿನ ಎದುರಿಗೆ ಸೂಚಿಸಿರುವ ದಿನಾಂಕದಿಂದ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಬಡ್ತಿ, ವೇತನ ಮತ್ತು ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2(3) ರನ್ವಯ ಪೂರ್ವಾನ್ವಯವಾಗಿ ಉಪ ನಿರ್ದೇಶಕರ ಹುದ್ದೆಯಲ್ಲಿ ಸ್ಥಾನಪನ್ನ ಆಧಾರದ ಮೇಲೆ ವೇತನ ಶ್ರೇಣಿ ರೂ. 7400-13120 ರಲ್ಲಿ ಉಪ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಕಾರ್ಯನಿರ್ವಹಿಸುತ್ತಿರುವ ಕಚೇರಿ : ಇಲಾಖೆ | ಸಕ್ರಮಗೊಳಿಸಿದ ದಿನಾಂಕ |
|---|---|---|---|
| 1 | 2 | 3 | 4 |
| | **ಶ್ರೀಯುತರಾದ** | | |
| 1 | ಜಿ. ಸರ್ದಾರ್‌ಖಾನ್ | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ, ಹಾಸನ | 22.04.2002 |
| 2 | ಸ್ವಾಮಿ ಬೌರಯ್ಯ | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ, ಗುಲ್ಬರ್ಗಾ (ದಿನಾಂಕ: 30.4.2004 ರಂದು ವಯೋನಿವೃತ್ತಿ ಹೊಂದಿರುತ್ತಾರೆ) | 18.7.2002 |
| 3 | ಮಂಗಲದಾಸ್ | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ, ಮಂಡ್ಯ | 31.12.2001 |
| 4 | ವಿಶ್ವನಾಥ ಪಿ. ಮುದ್ದಜ್ಜಿ | ಉಪ ನಿರ್ದೇಶಕರು, ಬಯಲುಸೀಮೆಯ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ | 30.1.2002 |
| 5 | ಡಿ. ಚಂದ್ರಶೇಖರಯ್ಯ | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನಾಧಿಕಾರಿ, ಜಿಲ್ಲಾ ಪಂಚಾಯತ್, ಚಾಮರಾಜನಗರ | 23.1.2002 |
| 6 | ಎಸ್.ಓ. ನಾರಾಯಣಪ್ಪ | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನಾಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು | 30.10.2002 |
| 7 | ಎಸ್. ಶಿವಲಿಂಗಯ್ಯ | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನಾಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು | 2.9.2002 |
| 8 | ಎಸ್. ಶರಣಪ್ಪ | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ, ಗದಗ, ರಾಯಚೂರು | 22.7.2002 |
| 9 | ಎಸ್.ಡಿ. ಹುಚ್ಚಮ್ಮನವರ | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ, ಗದಗ | 2.8.2002 |
| 10 | ಎ.ಡಿ. ದೊಡ್ಡಮನಿ | ಯೋಜನಾ ಅಂದಾಜು ಮತ್ತು ಮೌಲ್ಯ ಮಾಪನಾಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ | 26.7.2002 |
| 11 | ಎನ್. ಲೋಕೇಶ್ | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ, ಚಿಕ್ಕಮಗಳೂರು | 9.8.2002 |

ಮೇಲೆ ನಮೂದಿಸಿರುವ ದಿನಾಂಕಗಳು ಮುಂದೆ ಉಪ ನಿರ್ದೇಶಕರುಗಳ ಜೇಷ್ಠತಾ ಪಟ್ಟಿಯನ್ನು ಪುನರ್ ವಿಮರ್ಶಿಸಿದಾಗ ಆಗುವ ಬದಲಾವಣೆಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 630

**ಪಿ. ಪುಷ್ಪರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:-** ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು) ಯೋಜನೆಯಡಿ ರಾಜ್ಯ ಮಟ್ಟದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳ ನಿರ್ದೇಶನಾಲಯದ ಸಿಬ್ಬಂದಿಯನ್ನು ೨೦೦೪-೦೫ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಉಲ್ಲೇಖ:-**
೧. ಸರ್ಕಾರದ ಆದೇಶ ಸಂಖ್ಯೆ.ಆರ್‌ಡಿಪಿ.೨೮೫.ವಿಸೇಬಿ.೯೯, ಬೆಂಗಳೂರು,ದಿನಾಂಕ.೧೮.೩.೨೦೦೦.
೨. ಸರ್ಕಾರದ ಅ.ಟಿ.ಸಂ.ಗ್ರಾಅಪ.೧೩.ಎಫ್‌ಎನ್.೯೯(ಪಿ) ಬೆಂಗಳೂರು,ದಿನಾಂಕ.೧೦.೫.೨೦೦೦.
೩. ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.ಪ್ರಅಕಾ.೩೫.ಸಿಬ್ಬಂದಿ ೨೦೦೩, ದಿನಾಂಕ.೨೭.೫.೨೦೦೩.
೪. ಸರ್ಕಾರದ ಕಾರ್ಯದರ್ಶಿ,ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ.೨೬.೪.೨೦೦೪ ರಂದು ನಡೆದ ಸಭೆ ನಡವಳಿಗಳು.
೫. ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.ಪ್ರಅಕಾ.೩೮.ಎಸ್‌ಜಿಆರ್‌ವೈ. ೨೦೦೪.ದಿನಾಂಕ.೪.೫.೨೦೦೪.
೬. ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.೨೩.ಐಎವೈ.೨೦೦೪, ಬೆಂಗಳೂರು.ದಿನಾಂಕ.೧೦.೫.೨೦೦೪.

**ಪ್ರಸ್ತಾವನೆ:**

ಉಲ್ಲೇಖ (೧)(೨)(೩) ರಲ್ಲಿನ ಸರ್ಕಾರೀ ಆದೇಶ ಹಾಗೂ ಅನಧಿಕೃತ ಟಿಪ್ಪಣಿಯಂತೆ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು) ಯೋಜನೆಯಡಿ ರಾಜ್ಯ ಮಟ್ಟದಲ್ಲಿ ಸೃಜಿಸಲಾಗಿದ್ದ ಹುದ್ದೆ ಗಳನ್ನು ದಿನಾಂಕ.೩೧.೩.೨೦೦೪ ರವರೆಗೆ ಮುಂದುವರೆಸಲಾಗಿತ್ತು. ಉಲ್ಲೇಖ (೩) ರಲ್ಲಿನ ನಡವಳಿಯಂತೆ ಸರ್ಕಾರವು ಸದರಿ ಯೋಜನೆಯ ಅನುಷ್ಠಾನವನ್ನು ಮುಂದಿನ ಒಂದು ವರ್ಷದ ಅವಧಿಗೆ ಅಂದರೆ ೨೦೦೪-೦೫ನೇ ಸಾಲಿಗೆ ಮುಂದುವರೆಸಲು ನಿರ್ಧರಿಸಿರುತ್ತೆ.

ಆದುದರಿಂದ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು) ಯೋಜನೆಯಡಿ ರಾಜ್ಯಮಟ್ಟದಲ್ಲಿ ಸೃಜಿಸಲಾಗಿದ್ದ ಸಿಬ್ಬಂದಿಯನ್ನು ೨೦೦೪-೦೫ನೇ ಸಾಲಿನಲ್ಲಿ ಅಂದರೆ ದಿನಾಂಕ.೧.೪.೨೦೦೪ ರಿಂದ ೩೧.೩.೨೦೦೫ರವರೆಗೆ (ಎರಡೂ ದಿನಗಳು ಸೇರಿದಂತೆ) ಮುಂದುವರೆಸುವುದು ಅತ್ಯಾವಶ್ಯಕವೆಂದು ಭಾವಿಸಲಾಗಿದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.ಪ್ರಅಕಾ.೪೦.ಸಿಬ್ಬಂದಿ.೨೦೦೪.ಬೆಂಗಳೂರು, ದಿನಾಂಕ: ೧೪ನೇ ಜೂನ್ ೨೦೦೪**

ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು) ಯೋಜನೆಯಡಿ ಈ ಕೆಳಕಂಡ ಹುದ್ದೆಗಳನ್ನು ರಾಜ್ಯಮಟ್ಟದಲ್ಲಿ ಮುಂದಿನ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ.೧.೪.೨೦೦೪ ರಿಂದ ೩೧.೩.೨೦೦೫ ರವರೆಗೆ (ಎರಡೂ ದಿನಗಳು ಸೇರಿದಂತೆ) ಮುಂದುವರೆಸಲು ಈ ಮೂಲಕ ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| ೧ | ಹಿರಿಯ ಉಪ ನಿರ್ದೇಶಕರು | ೧ | ೯೫೮೦-೧೪೨೦೦ |
| ೨ | ಉಪ ನಿರ್ದೇಶಕರು | ೪ | ೭೪೦೦-೧೩೧೨೦ / ೮೦೦೦-೧೩೪೪೦ } ಎರಡೂ ವೇತನ ಶ್ರೇಣಿಗಳು ೧ನೇ ದರ್ಜೆ (ಕಿರಿಯ) ಅಧಿಕಾರಿ ವೃಂದದ್ದಾಗಿರುತ್ತೆ. |
| ೩ | ಸಹಾಯಕ ನಿರ್ದೇಶಕರು | ೨ | ೬೦೦೦-೧೧೨೦೦ |
| ೪ | ಶಿರಸ್ತೇದಾರರು | ೩ | ೫೨೦೦-೯೫೮೦ |
| ೫ | ಸಹಾಯಕ ಸಾಂಖ್ಯಿಕ ಅಧಿಕಾರಿ | ೨ | ೪೫೭೫-೮೪೦೦ |
| ೬ | ಪ್ರಥಮ ದರ್ಜೆ ಸಹಾಯಕರು | ೨ | ೩೮೫೦-೭೦೫೦ |
| ೭ | ಶೀಘ್ರಲಿಪಿಗಾರರು | ೨ | ೩೮೫೦-೭೦೫೦ |
| ೮ | ದ್ವಿತೀಯ ದರ್ಜೆ ಸಹಾಯಕರು | ೩ | ೩೦೦೦-೫೪೫೦ |
| ೯ | ಬೆರಳಚ್ಚುಗಾರರು | ೧ | ೩೦೦೦-೫೪೫೦ |
| ೧೦ | ವಾಹನ ಚಾಲಕರು | ೨ | ೩೦೦೦-೫೪೫೦ |
| ೧೧ | ದಲಾಯತ್ | ೩ | ೨೫೦೦-೩೮೫೦ |
| | ಒಟ್ಟು | ೨೫ | |

ಈ ಯೋಜನೆಯಡಿ ಇದರಿಂದ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "೨೫೧೫-೦೦-೮೦೦-೦-೦೭ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ (ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು)" ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ.ಹಿರೇಮಣಿಯವರ್**

ನಿರ್ದೇಶಕರು, ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು
ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. ೬೩೩

**ವಿಷಯ:-** ಪಶ್ಚಿಮ ಘಟ್ಟ ಅಭಿವೃದ್ಧಿ ಕಾರ್ಯಕ್ರಮ ಯೋಜನೆಯಡಿ ರಾಜ್ಯ ಮಟ್ಟದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆಯ ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳ ನಿರ್ದೇಶನಾಲಯದ ಸಿಬ್ಬಂದಿಯನ್ನು ೨೦೦೪-೦೫ ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಉಲ್ಲೇಖ:-** ೧. ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.ಪ್ರಅಕಾ.೩೬.ಸಿಬ್ಬಂದಿ ೨೦೦೩, ದಿನಾಂಕ.೨೭.೫.೨೦೦೩.

೨. ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ ಇ ವರ ಅಧ್ಯಕ್ಷತೆಯಲ್ಲಿ ದಿನಾಂಕ.೨೬.೪.೨೦೦೪ ರಂದು ನಡೆದ ಸಭೆ ನಡವಳಿಗಳು.

೩. ಸರ್ಕಾರದ ಆದೇಶ ಸಂಖ್ಯೆ.ಆರ್‌ಡಿಪಿ.೧೫.ಪಘಯೋ.೨೦೦೪.ದಿನಾಂಕ.೧೭.೫.೨೦೦೪.

**ಪ್ರಸ್ತಾವನೆ:**

ಉಲ್ಲೇಖ (೧)ರಲ್ಲಿನ ಸರ್ಕಾರದ ಆದೇಶದಂತೆ ಪಶ್ಚಿಮ ಘಟ್ಟ ಅಭಿವೃದ್ಧಿ ಕಾರ್ಯಕ್ರಮ ಯೋಜನೆಯಡಿ ರಾಜ್ಯ ಮಟ್ಟದಲ್ಲಿ ಸೃಜಿಸಲಾಗಿದ್ದ ಹುದ್ದೆಗಳನ್ನು ದಿನಾಂಕ.೩೧.೩.೨೦೦೪ ರವರೆಗೆ ಮುಂದುವರಿಸಲಾಗಿತ್ತು. ಹಾಲಿ ಸರ್ಕಾರವು ಉಲ್ಲೇಖ (೨) (೩)ರಂತೆ ಸದರಿ ಯೋಜನೆಯ ಅನುಷ್ಠಾನವನ್ನು ಮುಂದಿನ ಒಂದು ವರ್ಷದ ಅವಧಿಗೆ ಅಂದರೆ ೨೦೦೪-೦೫ ನೇ ಸಾಲಿಗೆ ಮುಂದುವರೆಸಲು ನಿರ್ಧರಿಸಿರುತ್ತೆ.

ಆದುದರಿಂದ ಪಶ್ಚಿಮ ಘಟ್ಟ ಅಭಿವೃದ್ಧಿ ಕಾರ್ಯಕ್ರಮ ಯೋಜನೆಯಡಿ ರಾಜ್ಯಮಟ್ಟದಲ್ಲಿ ಸೃಜಿಸಲಾಗಿದ್ದ ಸಿಬ್ಬಂದಿಯನ್ನು ೨೦೦೪-೦೫ನೇ ಸಾಲಿನಲ್ಲಿ ಅಂದರೆ ದಿನಾಂಕ.೧.೪.೨೦೦೪ ರಿಂದ ೩೧.೩.೨೦೦೫ರವರೆಗೆ (ಎರಡೂ ದಿನಗಳನ್ನು ಒಳಗೊಂಡಂತೆ) ಮುಂದುವರೆಸುವುದು ಅತ್ಯಾವಶ್ಯಕವೆಂದು ಭಾವಿಸಲಾಗಿದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ.ಗ್ರಾಅಪ.ಪ್ರಅಕಾ.೩೯.ಸಿಬ್ಬಂದಿ.೨೦೦೪.ಬೆಂಗಳೂರು, ದಿನಾಂಕ: ೧೪ನೇ ಜೂನ್ ೨೦೦೪**

ಪಶ್ಚಿಮ ಘಟ್ಟ ಅಭಿವೃದ್ಧಿ ಕಾರ್ಯಕ್ರಮ ಯೋಜನೆಯಡಿ ಈ ಕೆಳಕಂಡ ಹುದ್ದೆಗಳನ್ನು ರಾಜ್ಯಮಟ್ಟದಲ್ಲಿ ಮುಂದಿನ ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ.೧.೪.೨೦೦೪ ರಿಂದ ೩೧.೩.೨೦೦೫ ರವರೆಗೆ (ಎರಡೂ ದಿನಗಳನ್ನೊಳ ಗೊಂಡಂತೆ) ಮುಂದುವರೆಸಲು ಈ ಮೂಲಕ ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| ೧ | ಹಿರಿಯ ಉಪ ನಿರ್ದೇಶಕರು | ೧ | ೯೫೮೦-೧೪೨೦೦ |
| ೨ | ಉಪ ನಿರ್ದೇಶಕರು | ೧ | ೭೪೦೦-೧೩೧೨೦ ೮೦೦೦-೧೩೪೪೦ ಎರಡೂ ವೇತನ ಶ್ರೇಣಿಗಳು ೧ನೇ ದರ್ಜೆ (ಕಿರಿಯ) ಅಧಿಕಾರಿ ವೃಂದದ್ದಾಗಿರುತ್ತೆ. |
| ೩ | ಸಹಾಯಕ ನಿರ್ದೇಶಕರು | ೩ | ೬೦೦೦-೧೧೨೦೦ |
| ೪ | ಸಹಾಯಕ ಸಾಂಖ್ಯಿಕ ಅಧಿಕಾರಿ | ೨ | ೪೫೭೫-೮೪೦೦ |
| ೫ | ಪ್ರಥಮ ದರ್ಜೆ ಸಹಾಯಕರು | ೧ | ೩೮೫೦-೭೦೫೦ |
| ೬ | ದ್ವಿತೀಯ ದರ್ಜೆ ಸಹಾಯಕರು | ೧ | ೩೦೦೦-೫೪೫೦ |
| ೭ | ಬೆರಳಚ್ಚುಗಾರರು | ೨ | ೩೦೦೦-೫೪೫೦ |
| ೮ | ವಾಹನ ಚಾಲಕರು | ೧ | ೩೦೦೦-೫೪೫೦ |
| ೯ | ದಲಾಯತ್ | ೨ | ೨೫೦೦-೩೮೫೦ |
| | ಒಟ್ಟು | ೧೪ | |

ಈ ಯೋಜನೆಯಡಿ ಇ ದರಿಂದ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "೨೫೫೧ ಗುಡ್ಡಗಾಡು ಪ್ರದೇಶಗಳು-೦೧-ಪಶ್ಚಿಮ ಘಟ್ಟಗಳು-೦೦೧ ನಿರ್ದೇಶನ ಮತ್ತು ಆಡಳಿತ-೦-೦೧-ಯೋಜನಾ ಕೋಶ ಯೋಜನೆ" ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ.ಹಿರೇಮಣಿಯವರ್**

ನಿರ್ದೇಶಕರು, ಪ್ರದೇಶಾಭಿವೃದ್ಧಿ ಕಾರ್ಯಕ್ರಮಗಳು

ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ.

ಪಿ.ಆರ್. ೬೩೨

**ವಿಷಯ:** ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 ಪ್ರಕರಣ 61ಎ ರನ್ವಯ ಗ್ರಾಮ ಪಂಚಾಯತಿಗಳಲ್ಲಿ ಇತರ ಸಮಿತಿಗಳನ್ನು ರಚಿಸುವ ಕುರಿತು.

**ಪ್ರಸ್ತಾವನೆ:**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 61ಎ ರನ್ವಯ ಗ್ರಾಮ ಪಂಚಾಯತಿಗಳಲ್ಲಿ ಅಧಿನಿಯಮದ ಪ್ರಕರಣ 61 ರಲ್ಲಿ ನಿರ್ದಿಷ್ಟಪಡಿಸಿದ ಸ್ಥಾಯಿಸಮಿತಿಗಳನ್ನು ಹೊರತುಪಡಿಸಿ ಇತರೆ ಯಾವುದೇ

ಉದ್ದೇಶಗಳಿಗಾಗಿ ನಿರ್ಧರಿಸಬಹುದಾದ ಸದಸ್ಯರನ್ನೊಳಗೊಂಡ ಒಂದು ಅಥವಾ ಹೆಚ್ಚಿನ ಸಮಿತಿಗಳನ್ನು ನೇಮಕ ಮಾಡಲು ಅವಕಾಶ ಕಲ್ಪಿಸಲಾಗಿದೆ. ಈ ಸಮಿತಿಗಳನ್ನು ಯಾವ ಉದ್ದೇಶಕ್ಕಾಗಿ ಅದನ್ನು ನೇಮಕ ಮಾಡಲಾಗಿದೆಯೋ ಆ ಉದ್ದೇಶ ಪೂರ್ಣಗೊಂಡು ಸಮಿತಿಯು ವರದಿಯನ್ನು ನೀಡಿದ ನಂತರ ಸದರಿ ಸಮಿತಿಯು ರದ್ದಾಗುತ್ತದೆ.

ಅಧಿನಿಯಮದ ಪ್ರಕರಣ 61ಎ ರನ್ವಯ ರಚಿತವಾದ ಸಮಿತಿಗಳಿಗೆ ಗ್ರಾಮ ಪಂಚಾಯತಿ ತೀರ್ಮಾನಿಸಿದ ಚುನಾಯಿತ ಸದಸ್ಯರುಗಳಲ್ಲೊಬ್ಬರು ಸಮಿತಿಗೆ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಬಹುದಾಗಿರುತ್ತದೆ. ಈ ಸಮಿತಿಗಳು ನಿಯಮಿಸಬಹುದಾದಂಥಹ ವಿಧಾನದಲ್ಲಿ ಪಂಚಾಯತಿ ಪ್ರದೇಶದ ಅಂತಹ ನಿವಾಸಿಗಳನ್ನು ಸಹ–ಆಯ್ಕೆ (co-opt) ಮಾಡಿಕೊಳ್ಳಲು ಅವಕಾಶವಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ/09/ಜಿಪಸ/2004 ಬೆಂಗಳೂರು, ದಿನಾಂಕ: 6ನೇ ಮೇ 2004**

ಮೇಲಿನ ಅಂಶಗಳನ್ನು ಸರ್ಕಾರವು ಪರಿಶೀಲಿಸಿ ಗ್ರಾಮ ಪಂಚಾಯತಿಗಳಿಗೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 ಪ್ರಕರಣ 61ಎ ರನ್ವಯ ಗ್ರಾಮ ಪಂಚಾಯತಿಯು ರಚಿಸುವ ಇತರ ಸಮಿತಿಗಳು ಕೆಳಗೆ ತಿಳಿಸಿದಂತೆ ಪಂಚಾಯತಿ ಪ್ರದೇಶದ ನಿವಾಸಿಗಳನ್ನು ಸಹ–ಆಯ್ಕೆ (co-opt) ಮಾಡಿಕೊಳ್ಳಬಹುದಾಗಿದೆ ಮತ್ತು ಈ ಸಮಿತಿಯ ಕಾರ್ಯವಿಧಾನವು ಕೆಳಗೆ ತಿಳಿಸಿದಂತೆ ಇರತಕ್ಕದ್ದು.

**ಸಮಿತಿಯ ವ್ಯಾಪ್ತಿ:**

1. ಗ್ರಾಮ ಪಂಚಾಯತಿಯು ಶಾಸನಬದ್ಧವಾಗಿ ನಿರ್ವಹಿಸಬಹುದಾದ ಯಾವುದೇ ಕಾರ್ಯವನ್ನು ತನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅಥವಾ ಯಾವುದಾದರೂ ಪ್ರದೇಶದ ವ್ಯಾಪ್ತಿಯಲ್ಲಿ ಕೈಗೊಳ್ಳಲು ಈ ಸಮಿತಿಗೆ ಸೂಚಿಸಬಹುದಾಗಿದೆ.

**ಸಮಿತಿಯ ರಚನೆ:**

1. ಗ್ರಾಮ ಪಂಚಾಯತಿಯು ತನ್ನ ಅವಶ್ಯಕತೆ ಹಾಗೂ ಸ್ಥಳೀಯ ಸಂದರ್ಭಕ್ಕನುಗುಣವಾಗಿ ಸದಸ್ಯರನ್ನು ಈ ಸಮಿತಿಗೆ ನೇಮಕ ಮಾಡಬಹುದಾಗಿದೆ. ಆದ್ದರಿಂದ, ಸದಸ್ಯರುಗಳ ನೇಮಕಾತಿಗೆ ಗರಿಷ್ಠ ಮತ್ತು ಕನಿಷ್ಠ ಮಿತಿ ಇರುವುದಿಲ್ಲ.
2. ಸ್ಥಳೀಯ ಗ್ರಾಮ ಪಂಚಾಯತಿ ಸದಸ್ಯ (ರು) ಈ ಸಮಿತಿಗೆ ಕಡ್ಡಾಯವಾಗಿ ಸದಸ್ಯನಾ(ರಾ)ಗಿರತಕ್ಕದ್ದು.
3. ಈ ಸಮಿತಿಯು ಉದ್ದೇಶಿತ ವಿಷಯಕ್ಕೆ ಸಂಬಂಧಿಸಿದಂತೆ ಪಂಚಾಯತಿಯ ವ್ಯಾಪ್ತಿಯಲ್ಲಿ ಇರುವ ತಜ್ಞರನ್ನು ಅಥವಾ ಸಂಬಂಧಿಸಿದ ಇಲಾಖಾ ಅಧಿಕಾರಿ / ನೌಕರರನ್ನು ಅಥವಾ ಕನಿಷ್ಟ ಎರಡು ವರ್ಷದಿಂದ ಕಾರ್ಯನಿರ್ವಹಿಸುತ್ತಿರುವ ನೊಂದಾಯಿತ ಸ್ವಯಂಸೇವಾ ಸಂಸ್ಥೆಗಳನ್ನು ಅಥವಾ ಸ್ಥಳೀಯ ನಿವಾಸಿಗಳನ್ನು ಸಹ–ಆಯ್ಕೆ (co-opt) ಮಾಡಿಕೊಳ್ಳುವ ಅಧಿಕಾರ ಹೊಂದಿರುತ್ತದೆ.
4. ಈ ಸಮಿತಿಯ ಯಾವುದೇ ಸಭೆಗಳಲ್ಲಿ ಗ್ರಾಮ ಪಂಚಾಯತಿಯ ಅಧ್ಯಕ್ಷ / ಉಪಾಧ್ಯಕ್ಷರು ಹಾಜರಾಗಲು ಅರ್ಹತೆ ಹೊಂದಿರುತ್ತಾರೆ.
5. ಈ ಸಮಿತಿಗೆ ಸಹ–ಆಯ್ಕೆ (co-opt) ಯಾದ ಸ್ವಯಂಸೇವಾ ಸಂಸ್ಥೆಗಳು ಅಥವಾ ಇಲಾಖಾ ಅಧಿಕಾರಿಗಳನ್ನು ಆಹ್ವಾನಿತರೆಂದು ಮಾತ್ರ ಪರಿಗಣಿಸಬಹುದಾಗಿದೆಯೇ ಹೊರತು ಸದಸ್ಯರೆಂದು ಪರಿಗಣಿಸತಕ್ಕದ್ದಲ್ಲ.

**ಸಮಿತಿಯ ಅಧ್ಯಕ್ಷತೆ:**

1. ಈ ಸಮಿತಿಯ ಅಧ್ಯಕ್ಷ/ ಉಪಾಧ್ಯಕ್ಷರನ್ನು ಸಂಬಂಧಿಸಿದ ಸಮಿತಿಯ ಸದಸ್ಯರು ಆಯ್ಕೆ ಮಾಡಬಹುದಾಗಿದೆ.
2. ಈ ಸಮಿತಿಯ ಅಧ್ಯಕ್ಷತೆ ವಹಿಸಿರುವ ವ್ಯಕ್ತಿಗೆ ಚರ್ಚೆಯಲ್ಲಿ ಇರುವ ಯಾವುದೇ ವಿಷಯದಲ್ಲಿ ಹಣಕಾಸಿನ ಹಿತಾಸಕ್ತಿ ಇದೆ ಎಂದು ಸಭೆಯಲ್ಲಿ ಹಾಜರಿರುವ ಯಾವನೇ ಸದಸ್ಯನು ಅಭಿಪ್ರಾಯಪಟ್ಟರೆ ಮತ್ತು ಆ ಬಗ್ಗೆ ಒಂದು ಸೂಚನೆಯನ್ನು ಅಂಗೀಕರಿಸಿದರೆ ಅವನು ಅಂತಹ ಚರ್ಚೆಯು ನಡೆಯುತ್ತಿರುವಾಗ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದಲ್ಲ. ಅಥವಾ ಮತ ಕೊಡತಕ್ಕದ್ದಲ್ಲ ಅಥವಾ ಅದರಲ್ಲಿ ಭಾಗವಹಿಸತಕ್ಕದ್ದಲ್ಲ.

**ಸಮಿತಿಯ ಕಾರ್ಯವಿಧಾನ:**

1. ಈ ಸಮಿತಿಯ ಯಾವ ಉದ್ದೇಶಕ್ಕಾಗಿ ನೇಮಕ ಮಾಡಲಾಗಿದೆಯೋ ಆ ಉದ್ದೇಶವನ್ನು ಈಡೇರಿಸಲು ಅಗತ್ಯವಾಗಬಹುದಾದ ಅಧಿಕಾರಗಳನ್ನು ಗ್ರಾಮ ಪಂಚಾಯತಿಯು ನೀಡತಕ್ಕದ್ದು.
2. ಈ ಸಮಿತಿಯ ಕಾರ್ಯನಿರ್ವಹಣೆಗೆ ವಿಶೇಷ ಕಾರ್ಯವಿಧಾನದ ಅವಶ್ಯಕತೆ ಇದ್ದಲ್ಲಿ ಅದನ್ನು ಅಳವಡಿಸಿಕೊಳ್ಳಲು ಗ್ರಾಮ ಪಂಚಾಯತಿಯು ಸೂಕ್ತವಾದ ಅಧಿಕಾರವನ್ನು ನೀಡತಕ್ಕದ್ದು.
3. ಸಮಿತಿಯ ಸಭೆಗಳನ್ನು ಗ್ರಾಮ ಪಂಚಾಯತಿ ಸಭೆಗಳನ್ನು ನಡೆಸುವ ಕಾರ್ಯವಿಧಾನದಂತೆಯೇ ನಡೆಸತಕ್ಕದ್ದು.
4. ಉದ್ದೇಶ ಪೂರ್ಣಗೊಂಡು ಸಮಿತಿಯು ಗ್ರಾಮ ಪಂಚಾಯತಿಗೆ ವರದಿಯನ್ನು ನೀಡಿದ ನಂತರ ಸದರಿ ಸಮಿತಿಯು ರದ್ದಾಗತಕ್ಕದ್ದು.
5. ಸಮಿತಿಯಲ್ಲಿ ಕೈಗೊಳ್ಳುವ ತೀರ್ಮಾನಗಳು ಗ್ರಾಮ ಪಂಚಾಯತಿಯ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರತಕ್ಕದ್ದು.
6. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಪ್ರಕರಣ 53(4)(ಎ) ರಲ್ಲಿ ನಿಗಧಿಪಡಿಸಿದಂತೆ, ಈ ಸಮಿತಿಯ ಎಲ್ಲಾ ಸದಸ್ಯರೂ (ಸಹ–ಆಯ್ಕೆ (co-opt) ಯಾದ ಸದಸ್ಯರು ಹಾಗೂ ಆಹ್ವಾನಿತರೂ ಸೇರಿದಂತೆ) ಚರ್ಚೆಗೆ ಬರುವ ವಿಷಯಗಳಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ತಮ್ಮ ಸ್ವಂತ ಅಥವಾ ಆರ್ಥಿಕ ಹಿತಾಸಕ್ತಿ ಏನಾದರೂ ಇದ್ದಲ್ಲಿ ಅದನ್ನು ಗ್ರಾಮ ಪಂಚಾಯತಿಗೆ ತಿಳಿಸುವುದು ಸಂಬಂಧಿಸಿದ ಸದಸ್ಯರ ಜವಾಬ್ದಾರಿಯಾಗಿರುತ್ತದೆ ಹಾಗೂ ಚರ್ಚೆಯಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.

**ಸಮಿತಿಯ ಹೊಣೆಗಾರಿಕೆ:**

1. ಸಮಿತಿಯು ತನ್ನದೇ ಆದ ನಡವಳಿ ಮತ್ತು ದಾಖಲೆಗಳನ್ನು ಹೊಂದಬಹುದಾಗಿದೆ. ಆದರೆ, ಪ್ರತಿ ಸಭೆಯ ನಡವಳಿಯನ್ನು ತಪ್ಪದೇ ಮುಂದಿನ ಗ್ರಾಮ ಪಂಚಾಯತಿ ಸಭೆಯಲ್ಲಿ ಮಂಡಿಸತಕ್ಕದ್ದು.
2. ಈ ಸಮಿತಿಯ ನಡವಳಿಗಳು ಇತರೆ ಸಮಿತಿಯ ನಡವಳಿಗಳಂತೆಯೇ ಸಾರ್ವಜನಿಕರಿಗೆ ಮುಕ್ತವಾಗಿ ಪರಿವೀಕ್ಷಣೆಗೆ ಲಭ್ಯವಾಗಿರತಕ್ಕದ್ದು.
3. ಈ ಸಮಿತಿಗೆ ಹಣ ವಸೂಲಾತಿ ಮಾಡಲು ಹಾಗೂ ವೆಚ್ಚ ಮಾಡಲು ಸಹ ಗ್ರಾಮ ಪಂಚಾಯತಿಯು ಅಧಿಕಾರ ನೀಡಬಹುದಾಗಿದೆ.
4. ಈ ಸಮಿತಿಗೆ ಆರ್ಥಿಕ ಅಧಿಕಾರವನ್ನು ಗ್ರಾಮ ಪಂಚಾಯತಿಯು ನೀಡಿದ್ದಲ್ಲಿ, ಇದಕ್ಕೆ ಸಂಬಂಧಿಸಿದ ಎಲ್ಲಾ ಲೆಕ್ಕಪತ್ರಗಳು ಗ್ರಾಮ ಪಂಚಾಯತಿಯ ಲೆಕ್ಕಪತ್ರಗಳ ಭಾಗವಾಗಿರುತ್ತದೆ. ಈ ಲೆಕ್ಕಪತ್ರಗಳು ಗ್ರಾಮ ಪಂಚಾಯತಿಯ ಲೆಕ್ಕಪತ್ರಗಳಿಗೆ ಅನ್ವಯವಾಗುವ ರೀತಿಯಲ್ಲಿಯೇ ಲೆಕ್ಕಪರಿಶೋಧಕರ ತಪಾಸಣೆಗೆ ಒಳಪಡುತ್ತವೆ.
5. ಈ ಸಮಿತಿಯ ಎಲ್ಲಾ ಕಾರ್ಯಚಟುವಟಿಕೆಗಳು ಗ್ರಾಮ ಪಂಚಾಯತಿಯ ಚಟುವಟಿಕೆಗಳ ಭಾಗವೆಂದೇ ಪರಿಗಣಿಸಲಾಗಿದ್ದು, ಪಂಚಾಯತ್ ಜಮಾಬಂಧಿಯ ನಿಯಮಾವಳಿಗಳಿಗೆ ಬದ್ಧವಾಗಿರತಕ್ಕದ್ದು.

**ಗ್ರಾಮ ಪಂಚಾಯತಿಯ ಹೊಣೆಗಾರಿಕೆ:**

1. ಅಧಿನಿಯಮದ ಪ್ರಕರಣ 61 ಹಾಗೂ 61ಎ ಅಡಿ ರಚಿತವಾದ ಸ್ಥಾಯಿ ಸಮಿತಿ / ಇತರ ಸಮಿತಿಗಳ ವರದಿಯನ್ನು ಗ್ರಾಮ ಪಂಚಾಯತಿಯು ತನ್ನ ಮುಂಬರುವ ಸಭೆಯ ಕಾರ್ಯಸೂಚಿಯಲ್ಲಿ ಕಡ್ಡಾಯವಾಗಿ ಸೇರಿಸಿ ಚರ್ಚಿಸತಕ್ಕದ್ದು.
2. ಸಮಿತಿಯು ನೀಡಿದ ವರದಿಯನ್ನು ಸಾರ್ವಜನಿಕರ ಅವಗಾಹನೆಗಾಗಿ ಸೂಚನಾ ಫಲಕದಲ್ಲಿ ಪ್ರಕಟಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಶಾಮಸುಂದರ**

ಪಿ.ಆರ್. 634

ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ನಿವೃತ್ತಿ ಸಮಯದಲ್ಲಿ ನಿವೃತ್ತಿ ವೇತನದ ಪರಿವರ್ತನೆ ಬಗ್ಗೆ ಸೂಚನೆಗಳು

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 30.9.2003.
2) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 17.12.2003.
3) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 4.5.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಪಿಂಚಣಿ ನಿಯಮಗಳ ಪರಿಷ್ಕರಣೆಗೆ ಸಂಬಂಧಿಸಿದಂತೆ ಆದೇಶ ಹೊರಡಿಸಿದ್ದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 376 ಮತ್ತು 377ನೇ ನಿಯಮಗಳ ಪ್ರಕಾರ ನಿವೃತ್ತಿ ವೇತನವನ್ನು ಮಂಜೂರು ಮಾಡಲು ಸಕ್ಷಮವಾದ ಅಧಿಕಾರಿಯು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ಮೇರೆಗೆ ಸರ್ಕಾರಿ ನೌಕರನಿಗೆ ಮಂಜೂರು ಮಾಡಲಾದ ಅಥವಾ ಮಂಜೂರು ಮಾಡಬಹುದಾದ ಯಾವುದೇ ನಿವೃತ್ತಿ ವೇತನದ 1/3 ಅಂಶಕ್ಕಿಂತ ಹೆಚ್ಚಾಗದಷ್ಟು ಭಾಗವನ್ನು ಸರ್ಕಾರಿ ನೌಕರರು ಪರಿವರ್ತನೆ ಮಾಡಲು ಕಲ್ಪಿಸಿರುವ ಅವಕಾಶದ ಬದಲಿಗೆ ನಿವೃತ್ತಿ ವೇತನದ 1/5 ಭಾಗವನ್ನು ಪರಿವರ್ತನೆ ಮಾಡಲು ಆದೇಶಿಸಲಾಗಿತ್ತು. ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 377 ರಲ್ಲಿರುವ ನಿವೃತ್ತಿ ವೇತನದ ಧ್ವನಿತ ಸೋಡಿ ದರವನ್ನು (implicit discount rate) ಶೇಕಡ 4 ರಿಂದ ಶೇಕಡ 8ಕ್ಕೆ ಹೆಚ್ಚಿಸಿ ಅದಕ್ಕನುಗುಣವಾಗಿ ದಿನಾಂಕ: 17.12.2003 ರಲ್ಲಿ ಪರಿವರ್ತನಾ ಕೋಷ್ಟಕವನ್ನು ಹೊರಡಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ಈ ಸೌಲಭ್ಯಕ್ಕೆ ಸಂಬಂಧಿಸಿದಂತೆ ದಿನಾಂಕ: 30.9.2003 ರ ಮೇಲೆ (1) ರಲ್ಲಿ ಓದಲಾದ ಆದೇಶವನ್ನು ಹೊರಡಿಸುವ ಮೊದಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 376 ರಲ್ಲಿ ಇದ್ದ ಸೌಲಭ್ಯಗಳನ್ನೇ ದಿನಾಂಕ: 1.9.2003 ರಿಂದ ಮುಂದುವರೆಸಲು ನಿರ್ಣಯಿಸಿ ಆದೇಶವನ್ನು ಹೊರಡಿಸಲಾಗಿತ್ತು. ಹಾಗೂ ದಿನಾಂಕ: 17.12.2003 ರ ಆದೇಶದಲ್ಲಿ ಹೊರಡಿಸಲಾದ ಪರಿವರ್ತನಾ ಕೋಷ್ಟಕವನ್ನು ಅನ್ವಯಿಸಲು ಆದೇಶಿಸಲಾಗಿತ್ತು.

ಸರ್ಕಾರವು ಈ ವಿಚಾರವನ್ನು ಮರುಪರಿಶೀಲಿಸಿ, ಪ್ರಸ್ತುತ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ದಿನಾಂಕ: 30.9.2003 ನ್ನು ಭಾಗಶಃ ಮಾರ್ಪಡಿಸಿ ಹಾಗೂ ದಿನಾಂಕ: 17.12.2003 ರ ಆದೇಶದೊಂದಿಗೆ ಹೊರಡಿಸಲಾಗಿದ್ದ ಪರಿವರ್ತನಾ ಕೋಷ್ಟಕವನ್ನು ಹಿಂದಕ್ಕೆ ಪಡೆದು, ದಿನಾಂಕ: 1.9.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 376 ಮತ್ತು 377 ರಲ್ಲಿರುವ ಅವಕಾಶಗಳನ್ನೇ ಮುಂದುವರೆಸಲು ನಿರ್ಣಯಿಸಿರುತ್ತದೆ.

### ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ಬೆಂಗಳೂರು, ದಿನಾಂಕ: 25ನೇ ಮೇ 2004

ಪ್ರಸ್ತಾವನೆಯಲ್ಲಿ ತಿಳಿಸಿದ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ: 30.9.2003 ರ ಎಫ್‌ಡಿ 6 ಸನಿತಿ 2003, ಕ್ರಮಾಂಕದ ಆದೇಶವನ್ನು ಭಾಗಶಃ ಮಾರ್ಪಡಿಸಿ, ಹಾಗೂ ದಿನಾಂಕ: 17.12.2003 ರ ಆದೇಶದೊಂದಿಗೆ ಹೊರಡಿಸಲಾಗಿದ್ದ ಪರಿವರ್ತನಾ ಕೋಷ್ಟಕವನ್ನು ಹಿಂದಕ್ಕೆ ಪಡೆದು, ದಿನಾಂಕ: 1.9.2003 ರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 376 ಮತ್ತು 377 ರಲ್ಲಿರುವ

ಅವಕಾಶಗಳನ್ನೇ ಅಂದರೆ ಸರ್ಕಾರಿ ನೌಕರರ ನಿವೃತ್ತಿ ಸಮಯದಲ್ಲಿ ನಿವೃತ್ತಿ ವೇತನದ 1/3 ಭಾಗವನ್ನು ಪರಿವರ್ತನೆ ಮಾಡುವ ಅಧಿಕಾರಗಳನ್ನು ಹಾಗೂ ಅದರೊಂದಿಗಿರುವ ಪರಿವರ್ತನಾ ಕೋಷ್ಟಕವನ್ನು ಮುಂದುವರೆಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 635

**ಕೆ.ಎಸ್. ಗೋಪಾಲಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸೇವೆಗಳು-1)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ವೆಂಕಟರಮಣಯ್ಯ ಕೇ.ಕ.ಸ.ತೋ.ಉ.ನಿ. (ಜಿಪ) ರಾಯಚೂರು ರವರ ವಿರುದ್ದದ ಶಿಸ್ತು ಕ್ರಮಗಳ ಬಗ್ಗೆ.

**ಓದಲಾಗಿದೆ:** 1) ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂ: ತೋಇ:ಅ:ಸಿ:ವಿನಿ: 10-2:5-01-02, ದಿನಾಂಕ: 11.1.2002.

2) ಸರ್ಕಾರದ ಕಾರಣ ಕೇಳುವ ಪತ್ರ ಸಂ: ಕೃತೋಇ 40:ತೋಸೇಪ 2002, ದಿನಾಂಕ: 31.10.2002.

3) ಆರೋಪಿತ ಅಧಿಕಾರಿ:ನೌಕರರ ಪ್ರತಿರಕ್ಷಣಾ ಹೇಳಿಕೆ ದಿನಾಂಕ: 25.6.2003.

**ಪ್ರಸ್ತಾವನೆ:**

ಶ್ರೀ ವೆಂಕಟರಮಣಯ್ಯ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಇವರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ.) ರಾಯಚೂರು ಹುದ್ದೆಯಲ್ಲಿ ದಿನಾಂಕ: 10.7.2000 ದಿಂದ ದಿ: 1.5.2001 ರವರೆಗೆ ಹೆಚ್ಚುವರಿ ಪ್ರಭಾರೆಯಲ್ಲಿ ಕಾರ್ಯ ನಿರ್ವಹಿಸಿದ ಅವಧಿಯಲ್ಲಿ ಬಂಜರು ಭೂಮಿ ಅಭಿವೃದ್ಧಿ ಹಾಗೂ ಉದ್ಯೋಗ ಭರವಸೆ ಯೋಜನೆಯಡಿಯಲ್ಲಿ 2000-01ನೇ ಸಾಲಿನಲ್ಲಿ ಮಲ್ಲಿಗೆ, ಬೆಂಡೆ ಬೀಜ ಮತ್ತು ಇತರೆ ಸಸ್ಯಾಗಾರಗಳನ್ನು ಖರೀದಿಸಿ ರೈತ ಫಲಾನುಭವಿಗಳಿಗೆ ವಿತರಿಸುವ ಕಾರ್ಯಕ್ರಮದಡಿಯಲ್ಲಿ ಇವರು ಗಿಡ ಮತ್ತು ಬೀಜಗಳನ್ನು ಖರೀದಿಸಿದಂತೆ ರೂ. 1,53,100.00 ಕ್ಕೆ ನಗದು ಬಿಲ್ಲುಗಳನ್ನು ಯೋಜನೆಯಡಿಯಲ್ಲಿ ಒದಗಿಸಿದ ಅನುದಾನ ಪಡೆದಿದ್ದು, ಬ್ಯಾಂಕಿನಿಂದ ನಗದೀಕರಿಸಿದ ಹಣವನ್ನು ನಗದು ವಹಿಗೆ ತೆಗೆದುಕೊಂಡಿರುವುದಿಲ್ಲ. ಅಲ್ಲದೇ ಖರೀದಿಗೆ ಸಂಬಂಧಿಸಿದಂತೆ ಫಲಾನುಭವಿಗಳ ಪಟ್ಟಿಗೆ ಅನುಮೋದನೆ ಪಡೆದಿರುವುದಿಲ್ಲ ಮತ್ತು ಸಕ್ಷಮ ಪ್ರಾಧಿಕಾರದ ಮಂಜೂರಾತಿ ಪಡೆದಿರುವುದಿಲ್ಲ. ಹಾಗೂ ಹಣವನ್ನು ಖರ್ಚು ಮಾಡಿದ ಬಗ್ಗೆ ನಗದು ವಹಿಯಲ್ಲಿ ಯಾವುದೇ ದಾಖಲೆ ಇರುವುದಿಲ್ಲ. ಫಲಾನುಭವಿಗಳಿಗೆ ವಿತರಿಸಿದ ಬಗ್ಗೆ ಯಾವುದೇ ಪಾವತಿ ರಸೀದಿಗಳು ಇರುವುದಿಲ್ಲ. ಯೋಜನೆಯ ಮಾರ್ಗಸೂಚಿಯಂತೆ ನಿಯಮಾನುಸಾರ ಹಣ ಬಳಕೆ ಪ್ರಮಾಣಪತ್ರ ಮತ್ತು ಸಂಪೂರ್ಣ ಲೆಕ್ಕವನ್ನು ಒದಗಿಸಿರುವುದಿಲ್ಲ. ಆದ್ದರಿಂದ ಸದರಿ ಮೊಬಲಗಿನ ಮೊತ್ತ ವೆಚ್ಚದಲ್ಲಿ ಖರೀದಿಸಲಾದ ಗಿಡ : ಸಾಮಗ್ರಿಗಳನ್ನು ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಕೋರಿದ್ದಾರೆ. ಶ್ರೀ ವೆಂಕಟರಮಣಯ್ಯ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರವರಿಗೆ ಮೇಲ್ಕಂಡ ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯಂತೆ ಮೇಲೆ ಓದಲಾದ (2) ರ ಸರ್ಕಾರಿ ಕಾರಣ ಕೇಳುವ ಪತ್ರದನ್ವಯ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿದ್ದು, ಸದರಿ ದೋಷಾರೋಪಣಾ ಪಟ್ಟಿಗೆ ಕ್ರಮಾಂಕ 3 ರಲ್ಲಿ ಓದಲಾದ ದಿನಾಂಕ: 25.6.2003ರ ಪತ್ರದಲ್ಲಿ ಆರೋಪಿತ ಅಧಿಕಾರಿ ಹೇಳಿಕೆ ನೀಡಿ ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದಾರೆ. ಅವರ ಹೇಳಿಕೆಗಳನ್ನು ಪರಿಶೀಲಿಸಲಾಗಿ ಹೇಳಿಕೆ ತೃಪ್ತಿಕರವಾಗಿರುವುದಿಲ್ಲ. ಆದ್ದರಿಂದ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣಾಧಿಕಾರಿ : ಮಂಡನಾಧಿಕಾರಿಗಳನ್ನು ನೇಮಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 40 ತೋಸೇಪ 2002, ಬೆಂಗಳೂರು, ದಿನಾಂಕ: 8ನೇ ಜೂನ್ 2004**

ಶ್ರೀ ವೆಂಕಟರಮಣಯ್ಯ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಸಿಂಧನೂರು ಇವರು ಈ ಹಿಂದೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿಲ್ಲಾ ಪಂಚಾಯತ್) ರಾಯಚೂರು ಹುದ್ದೆಯಲ್ಲಿ ಪ್ರಭಾರೆಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಬಂಜರು ಭೂಮಿ ಅಭಿವೃದ್ಧಿ ಯೋಜನೆ ಹಾಗೂ ಉದ್ಯೋಗ ಭರವಸೆ ಯೋಜನೆಯಡಿಯಲ್ಲಿ ಬಿಡುಗಡೆಯಾದ ಮೊತ್ತವನ್ನು ದುರುಪಯೋಗಪಡಿಸಿಕೊಂಡಿರುವ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ನೇ ನಿಯಮದ 2ನೇ ಉಪ ನಿಯಮ ಮತ್ತು 3ನೇ ಉಪ ನಿಯಮದ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ನಂದಕುಮಾರ್ ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಅಧೀಕ್ಷಕರು ತೋಟಗಾರಿಕೆ ಉಪ ನಿರ್ದೇಶಕರ ಕಾರ್ಯಾಲಯ (ಜಿ.ಪಂ) ರಾಯಚೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು, ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೆಯೇ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ : ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ. 6000.00 (ರೂ. ಆರು ಸಾವಿರ ಮಾತ್ರ) ಗಳ ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರೈಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 637

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ.

**ಲೋಕೋಪಯೋಗಿ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಲೋಇ 11 ಬನೌಸೇ 2004, ಬೆಂಗಳೂರು, ದಿನಾಂಕ: 2ನೇ ಜೂನ್ 2004**

ಸರ್ಕಾರದ ಆದೇಶ ಸಂಖ್ಯೆ: ಲೋಇ 3 ಬನೌಸೇ 2000(1) ದಿನಾಂಕ: 10.10.2003ರ ಆದೇಶ ಭಾಗದ ಖಂಡಿಕೆ 1 ರಲ್ಲಿನ 3ನೇ ಸಾಲಿನಲ್ಲಿ ನಮೂದಿಸಿರುವ "ಸಹಾಯಕ ಕಾರ್ಯಪಾಲಕ ಇಂಜಿನಿಯರ್" ಎಂಬ ಪದಗಳನ್ನು "ಸಹಾಯಕ ಕಾರ್ಯಪಾಲಕ ಇಂಜಿನಿಯರ್, ವಿಭಾಗ-I" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಹಾಗೂ ಸದರಿ ಖಂಡಿಕೆಯ 6 ಮತ್ತು 7ನೇ ಸಾಲಿನಲ್ಲಿ ಬರುವ "ಇನ್ನು ಮುಂದೆ ಈ ಎಲ್ಲಾ 5 ಹುದ್ದೆಗಳನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್" ಎಂಬ ಪದಗಳಿಗೆ ಬದಲಾಗಿ "ಇನ್ನು ಮುಂದೆ ಈ ಎಲ್ಲಾ 5 ಹುದ್ದೆಗಳ ಪೈಕಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ವಿಭಾಗ-I ಈ ಒಂದು ಹುದ್ದೆಯನ್ನು ಹೊರತುಪಡಿಸಿ, ಉಳಿದ 4 ಹುದ್ದೆಗಳನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್, ವಿಭಾಗ-II" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 638

**ಎಸ್. ಚಂದ್ರಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಕೆ.ಕೆ. ನಾಯಕ್, ನಿರ್ದೇಶಕರು, ಜಯಣ್ಣ ಜಂಟಿ ನಿರ್ದೇಶಕರು, ಖಜಾನೆ ಇಲಾಖೆ, ವಿ. ಜಲಜಾಕ್ಷಿ ಸಹಾಯಕ ಖಜಾನೆ ಅಧಿಕಾರಿ ರವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಮಂಡನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಕ್ರಮಾಂಕ: ಸಿಆಸುಇ 5 ಎಸ್‌ಇಎನ್ 2001, ದಿನಾಂಕ: 19.12.2003.
2) ಶ್ರೀಮತಿ ವಿ. ಜಲಜಾಕ್ಷಿ ರವರ ದಿನಾಂಕ: 21.1.2004 ರವರ ಲಿಖಿತ ಹೇಳಿಕೆ, ಶ್ರೀ ಜಯಣ್ಣ, ಜಂಟಿ ನಿರ್ದೇಶಕರು ಅವರ ಉತ್ತರ ದಿನಾಂಕ: 11.5.2004.

**ಪ್ರಸ್ತಾವನೆ:**

ಗೃಹ ನಿರ್ಮಾಣ ಅಭಿವೃದ್ಧಿ ಮತ್ತು ಹಣಕಾಸು ನಿಗಮದ ವತಿಯಿಂದ ಸರ್ಕಾರಿ ನೌಕರರು ಪಡೆದ ಗೃಹ ನಿರ್ಮಾಣ ಮುಂಗಡದ ಮರು ಪಾವತಿ ತೀರುವಳಿ ಸಂದರ್ಭದಲ್ಲಿ ಒಟ್ಟು ರೂ. 25,50,045.00 ರೂಪಾಯಿಗಳನ್ನು ಹೆಚ್ಚಾಗಿ ವಸೂಲು ಮಾಡಿ ದುರುಪಯೋಗಪಡಿಸಿಕೊಂಡ ಆರೋಪಕ್ಕಾಗಿ ಶ್ರೀ ಕೆ.ಕೆ. ನಾಯಕ್, ಹಿಂದಿನ ನಿರ್ದೇಶಕರು, ಶ್ರೀ ಜಯಣ್ಣ ಜಂಟಿ ನಿರ್ದೇಶಕರು ಹಾಗೂ ಶ್ರೀಮತಿ ವಿ. ಜಲಜಾಕ್ಷಿ, ಸಹಾಯಕ ಖಜಾನೆ ಅಧಿಕಾರಿ, ಖಜಾನೆ ಇಲಾಖೆ ಅವರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 19.12.2003 ರ ನೋಟೀಸನ್ನು ಜಾರಿ ಮಾಡುವ ಮೂಲಕ ವಿಚಾರಣೆ ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 21.1.2004 ಹಾಗೂ 14.5.2004ರ ಲಿಖಿತ ಉತ್ತರಗಳಲ್ಲಿ ಶ್ರೀಮತಿ ಜಲಜಾಕ್ಷಿ ಸಹಾಯಕ ಖಜಾನೆ ಅಧಿಕಾರಿ ಹಾಗೂ ಶ್ರೀ ಜಯಣ್ಣ, ಜಂಟಿ ನಿರ್ದೇಶಕರುಗಳು ಆರೋಪಗಳನ್ನು ನಿರಾಕರಿಸಿದ್ದಾರೆ. ಒಂದನೇ ಆರೋಪಿ ಶ್ರೀ ಕೆ.ಕೆ. ನಾಯಕ್ ಅವರು ಯಾವುದೇ ಉತ್ತರ ನೀಡಿರುವುದಿಲ್ಲ. ಆದುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ವಿಚಾರಣೆಯನ್ನು ನಡೆಸುವುದು ಅತ್ಯಾವಶ್ಯಕವಾಗಿದೆ ಎಂದು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಿಆಸುಇ 5 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 28ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಕೆ. ನಾಯಕ್, ವಿಶೇಷ ಅಧಿಕಾರಿ, ಆರ್ಥಿಕ ಇಲಾಖೆ (ನಿವೃತ್ತಿ ವೇತನ) ಶ್ರೀ ಜಯಣ್ಣ, ಜಂಟಿ ನಿರ್ದೇಶಕರು, ಖಜಾನೆ ಇಲಾಖೆ ಹಾಗೂ ಶ್ರೀಮತಿ ಜಲಜಾಕ್ಷಿ, ಸಹಾಯಕ ಖಜಾನೆ ಅಧಿಕಾರಿ, ಖಜಾನೆ ಇಲಾಖೆ ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಶ್ರೀಮತಿ ವತ್ಸಲ ವತ್ಸ, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಿಚರ್ಡ್ ಲೋಬೋ, ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ, ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳಲ್ಲಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 639

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಎಂ. ಶಿವಾನಂದ, ನಿವೃತ್ತ ಇಂಜಿನಿಯರ್-ಇನ್-ಚೀಫ್ ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಆದೇಶ ಕ್ರಮಾಂಕ: ಸಿಆಸುಇ 34 ಎಸ್‌ಇಎನ್ 95, ದಿನಾಂಕ: 8.5.1996.
2) ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರ ಕ್ರಮಾಂಕ: ಲೋಕ್:ಎಆರ್‌ಇ-3: ಇಎನ್‌ಕ್ಯೂ-5:96-97, ದಿನಾಂಕ: 7.7.2003.

3) ನೋಟೀಸ್ ಕ್ರಮಾಂಕ: ಸಿಆಸುಇ 34 ಎಸ್‌ಇಎನ್ 95, ದಿನಾಂಕ: 19.11.2003.
4) ಶ್ರೀ ಎಂ. ಶಿವಾನಂದ, ನಿವೃತ್ತ ಇಂಜಿನಿಯರ್-ಇನ್-ಚೀಫ್ ಅವರ ದಿನಾಂಕ: 13.12.2003 ಉತ್ತರ.
5) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರದ ಕ್ರಮಾಂಕ:ಪಿಎಸ್‌ಸಿ 177 ಸಿಎನ್‌ಎಸ್ 2003, ದಿನಾಂಕ: 30.4.2004.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ನಿರ್ಮಾಣ ನಿಗಮದಲ್ಲಿ 1992-95 ರ ಅವಧಿಯಲ್ಲಿ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ನಿಗಮಕ್ಕೆ ವಹಿಸಲ್ಪಟ್ಟ ಸರ್ಕಾರಿ ಕಾಮಗಾರಿಗಳನ್ನು ಆಡಳಿತ ಮಂಡಳಿಯ ಗಮನಕ್ಕೆ ತರದೇ ಉಪ ಗುತ್ತಿಗೆಗೆ ವಹಿಸುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿ ದುರ್ನಡತೆ ಎಸಗಿದ ಆರೋಪಕ್ಕಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 8.5.1996ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ಶಿವಾನಂದ, ನಿವೃತ್ತ ಇಂಜಿನಿಯರ್-ಇನ್-ಚೀಫ್ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 7.7.2003 ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು:-

ಶ್ರೀ ಎಂ. ಶಿವಾನಂದ, ನಿವೃತ್ತ ಇಂಜಿನಿಯರ್-ಇನ್-ಚೀಫ್ ಅವರು 1992-95 ರ ಅವಧಿಯಲ್ಲಿ ಕರ್ನಾಟಕ ರಾಜ್ಯ ನಿರ್ಮಾಣ ನಿಗಮದ ವ್ಯವಸ್ಥಾಪಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ನಿಗಮದಲ್ಲಿ ನಡೆಯಿತೆನ್ನಲಾದ ಅವ್ಯವಹಾರಗಳ ಬಗ್ಗೆ ತನಿಖೆ ನಡೆಸಲು ನೇಮಿಸಲಾಗಿದ್ದ ಏಕ ಸದಸ್ಯ ಸತ್ಯಶೋಧನಾ ಸಮಿತಿಯ ಅಧ್ಯಕ್ಷ ಸಿಸಿಲ್ ನರೋನಾ, ಸಮಿತಿಗೆ ನೆರವಾದ ಶ್ರೀ ಗೋಪಾಲಕೃಷ್ಣ, ನಿವೃತ್ತ ಸೂಪರಿಂಟೆಂಡಿಂಗ್ ಇಂಜಿನಿಯರ್ ಹಾಗೂ ಶ್ರೀ ಕೆ. ವಾಸುದೇವರಾವ್, ನಿವೃತ್ತ ವಾಣಿಜ್ಯ ಲೆಕ್ಕಪತ್ರ ನಿರ್ದೇಶಕರುಗಳನ್ನು ಪ್ರಧಾನ ಸಾಕ್ಷಿಗಳನ್ನಾಗಿ ಪರಿಗಣಿಸಿ ಸತ್ಯಶೋಧನಾ ಸಮಿತಿಯ ವರದಿ ಹಾಗೂ ಅದರಲ್ಲಿ ಉಲ್ಲೇಖಿಸಲಾದ ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು ವಿಚಾರಣೆ ನಡೆಸಲಾಗಿದೆ. ನಿಗಮಕ್ಕೆ ಹಣಕಾಸು ನಿರ್ದೇಶಕರ ಹುದ್ದೆಯ ಅಗತ್ಯವನ್ನು ಮನಗಂಡೇ ಸರ್ಕಾರವು ಅದನ್ನು ಮಂಜೂರು ಮಾಡಿತ್ತು. ನಿಗಮದ ಆರ್ಥಿಕ ವ್ಯವಹಾರವು ಶಿಸ್ತುಬದ್ಧವಾಗಿ ನಡೆಯಬೇಕೆಂಬ ಉದ್ದೇಶದಿಂದಲೇ ಈ ವ್ಯವಸ್ಥೆ ಇತ್ತು. ಆದರೆ ಆರೋಪಿಯು ಅದನ್ನು ತುಂಬದೇ ತೆರವಾಗಿಯೇ ಉಳಿಸಿಕೊಂಡು ತನ್ನ ಹಂತದಲ್ಲಿಯೇ ಅಧಿಕಾರ ಚಲಾಯಿಸಿರುವುದು ದಾಖಲೆಗಳಿಂದ ಕಂಡು ಬಂದಿದೆ. ಏಕ ಸದಸ್ಯ ಸತ್ಯಶೋಧನಾ ಸಮಿತಿಯು ಪರಾಮರ್ಶಿಸಿದ 55 ಕಾಮಗಾರಿಗಳ ಪೈಕಿ 50 ಕಾಮಗಾರಿಗಳನ್ನು ನಿಗಮಕ್ಕೆ ನೇರವಾಗಿ ವಹಿಸಲಾಗಿತ್ತು. ಸರ್ಕಾರ ನೀಡುವ ಮೊತ್ತದಲ್ಲಿ ಶೇಕಡ 95 ಕ್ಕಿಂತ ಹೆಚ್ಚಿನ ಪಾಲನ್ನು ಉಪ ಗುತ್ತಿಗೆದಾರರಿಗೆ ನೀಡಬೇಕಾದ ಪ್ರಸ್ತಾವನೆಗಳನ್ನು ಮಂಡಳಿಯ ಮುಂದೆ ತರಬೇಕೆಂಬ ನಿಬಂಧನೆಯನ್ನು ಆರೋಪಿಯು ವ್ಯವಸ್ಥಿತವಾಗಿ ಉಲ್ಲಂಘಿಸಿ ತನ್ನ ಹಂತದಲ್ಲೇ ಕಾಮಗಾರಿಗಳನ್ನು ಉಪ ಗುತ್ತಿಗೆಗೆ ವಹಿಸಿದ್ದಾರೆ. ನಿಗಮದ ಮೂಲ ಉದ್ದೇಶವನ್ನೇ ಗಾಳಿಗೆ ತೂರಿದ್ದಾರೆ. ವಿವಿಧ ಇಲಾಖೆಗಳಿಂದ 1991-92 ರಿಂದ 1994-95 ರವರೆಗೆ ನಿಗಮಕ್ಕೆ ವಹಿಸಲಾದ 12,041.75 ಲಕ್ಷ ರೂಪಾಯಿಗಳ ಭಾರೀ ನೀರಾವರಿ ಕಾಮಗಾರಿಗಳನ್ನು ನಿಗಮವೇ ಕಾರ್ಯಗತಗೊಳಿಸಬೇಕಾಗಿದ್ದರೂ ತನ್ನ ಹಂತದಲ್ಲೇ ಉಪ ಗುತ್ತಿಗೆಗೆ ವಹಿಸಿದ್ದಾರೆ.

ನೀರಾವರಿ ಇಲಾಖೆಗೆ ಸೇರಿದ ದೊಡ್ಡ ಗಾತ್ರದ ಭಾರೀ ಮಣ್ಣಿನ ಕೆಲಸ ಕಾರ್ಯವನ್ನು ನಿರ್ವಹಿಸಲು ನಿಗಮದಲ್ಲಿ ಭಾರೀ ಯಂತ್ರಗಳು ಇಲ್ಲದಿದ್ದರೂ ಸಹ ಸದರೀ ಕಾಮಗಾರಿಗಳನ್ನು ವಹಿಸಿಕೊಂಡಿದ್ದಾರೆ. ನಿಗಮದ ವತಿಯಿಂದಲೇ ಭಾರೀ ಯಂತ್ರಗಳನ್ನು ಬಾಡಿಗೆಗೆ ಪಡೆದು ಆ ಕಾಮಗಾರಿಗಳನ್ನು ನಿರ್ವಹಿಸಬೇಕಿತ್ತು. ಆದರೆ ಆರೋಪಿಯು ಆ ರೀತಿ ಮಾಡದೇ ಕಾಮಗಾರಿಯನ್ನೇ ಉಪಗುತ್ತಿಗೆದಾರರಿಗೆ ವಹಿಸಿದ್ದಾರೆ. ಉಪ ಗುತ್ತಿಗೆದಾರರಲ್ಲಿಯೂ ಭಾರೀ ಯಂತ್ರಗಳು ಇರದೇ ಅವರೂ ಸಹ ಯಂತ್ರಗಳನ್ನು ಬಾಡಿಗೆಗೆ ತಂದು ಕಾಮಗಾರಿಯನ್ನು ನಿರ್ವಹಿಸಿದ್ದರಿಂದಾಗಿ ನಿಗಮಕ್ಕೆ 600.06 ಲಕ್ಷ ರೂಪಾಯಿಗಳ ನಷ್ಟ ಉಂಟಾಗಿದೆ. ನಿಗಮಕ್ಕೆ ವಹಿಸಿದ ಕಾಮಗಾರಿಗಳನ್ನು ಗುತ್ತಿಗೆದಾರರಿಗೆ ನೀಡಿ ಅವುಗಳ ಬೆಲೆಗಳ ಬಗ್ಗೆ ಪ್ರತಿ ವರ್ಷ ಶೇಕಡ 10 ರಷ್ಟು ಹೆಚ್ಚಳವಾಗುವಂತೆ ದರ ನಿಗದಿಪಡಿಸಿದ್ದು ಆ ಹಂತದಲ್ಲಿ ತನ್ನ ಅಧೀನ ಅಧಿಕಾರಿ : ನೌಕರರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೇ ತನ್ನ ಹಂತದಲ್ಲೇ ಎಲ್ಲವನ್ನೂ ನಿರ್ವಹಿಸಿ, ನಿಗಮಕ್ಕೆ 915.16 ಲಕ್ಷ ರೂಪಾಯಿಗಳ ನಷ್ಟ ಉಂಟು ಮಾಡಿದ್ದಾರೆ. ಹಾಗೆಯೇ ನಿಗಮಕ್ಕೆ ವಹಿಸಲಾದ ಕಾಮಗಾರಿಗಳನ್ನು ಉಪ ಗುತ್ತಿಗೆಗೆ ನೀಡುವ ಮೂಲಕ ನಿಗಮಕ್ಕೆ ಬಂದ ಲಾಭದಲ್ಲಿ 600.60 ಲಕ್ಷ ರೂಪಾಯಿಗಳನ್ನು ಗುತ್ತಿಗೆದಾರರಿಗೆ ನೀಡಿ ನಿಗಮಕ್ಕೆ ಅಷ್ಟೇ ಮೊತ್ತದ ಆರ್ಥಿಕ ನಷ್ಟ ಉಂಟು ಮಾಡಿದ್ದಾರೆ. ಹಾಗೆಯೇ ಕೊಳ್ಳೇಗಾಲ ತಾಲ್ಲೂಕಿನ ಉಡುತೊರೆಹಳ್ಳ ಯೋಜನೆಯ ಕಾಮಗಾರಿ ಹಾಗೂ ರಾಯಚೂರು - ಮಾನ್ವಿ, ಸಿಂಧನೂರು-ಗಂಗಾವತಿ ರಸ್ತೆ ಅಭಿವೃದ್ಧಿ ಯೋಜನೆ ಕಾಮಗಾರಿಗಳನ್ನು ಸರಿಯಾಗಿ ಮೇಲ್ವಿಚಾರಣೆ ಮಾಡದೇ ನಿಗಮಕ್ಕೆ ಬಂದ ಲಾಭಾಂಶದ ಮೊತ್ತವನ್ನು ಉಪಗುತ್ತಿಗೆದಾರರಿಗೆ ಬಿಟ್ಟುಕೊಟ್ಟಿರುತ್ತಾರೆ. ಹೀಗಾಗಿ ನಿಗಮಕ್ಕೆ ವಹಿಸಿದ್ದ ಕಾಮಗಾರಿಗಳನ್ನು ಆಡಳಿತ ಮಂಡಳಿಯ ಗಮನಕ್ಕೆ ತರದೇ ಉಪಗುತ್ತಿಗೆಗೆ ವಹಿಸುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ 9 ಆರೋಪಗಳು ಸಾಬೀತಾಗಿವೆ.

ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು. ಅದರಲ್ಲಿನ ನಿರ್ಣಯಗಳು ಸಮರ್ಪಕವಾಗಿದ್ದ ಕಾರಣ ಅದನ್ನು ಒಪ್ಪಿಕೊಂಡು ಶ್ರೀ ಎಂ. ಶಿವಾನಂದ, ನಿವೃತ್ತ ಇಂಜಿನಿಯರ್-ಇನ್-ಚೀಫ್ ಅವರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 19.11.2003ರ ಎರಡನೇ ಕಾರಣ ಕೇಳುವ ನೋಟೀಸ್ ನೀಡಿ ಸಾಬೀತಾದ ಆರೋಪಗಳ ಸಂಬಂಧ ಎಸಗಿದ ದುರ್ನಡತೆಗಾಗಿ ಕೆ.ಸಿ.ಎಸ್.ಆರ್. ನಿಯಮ 214 ಹಾಗೂ ನಿಯಮ 118(ಎ) ರನ್ವಯ ಅವರ ನಿವೃತ್ತಿ ಸೌಲಭ್ಯ ಹಾಗೂ ಗಳಿಕೆ ರಜೆ ನಗದೀಕರಣವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂಬುದಕ್ಕೆ ಸಮಜಾಯಿಷಿ ಕೇಳಲಾಯಿತು. ಈ ನೋಟೀಸ್‌ಗೆ ಆರೋಪಿ ನಿವೃತ್ತ ಅಧಿಕಾರಿಯು ಮೇಲೆ (4) ರಲ್ಲಿ ಓದಲಾದ ದಿನಾಂಕ: 13.12.2003 ರ ಉತ್ತರ ಸಲ್ಲಿಸಿ ತಾನು ನಿಗಮದ ವ್ಯವಸ್ಥಾಪಕ ನಿರ್ದೇಶಕ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹೇಮಾವತಿ ಹಾಗೂ ವಾರಾಹಿ ನಾಲಾ ಕಾಮಗಾರಿಗಳನ್ನು ತಮ್ಮ ಕಡೆಯ ಗುತ್ತಿಗೆದಾರರಿಗೆ ವಹಿಸುವಂತೆ ಅಂದಿನ ಮುಖ್ಯಮಂತ್ರಿಗಳು ಒತ್ತಡ

ಹೇರಿದ್ದರು. ಅದನ್ನು ನಿರಾಕರಿಸಿದ ಕಾರಣಕ್ಕಾಗಿ ಸೇಡಿನ ಕ್ರಮ ಕೈಗೊಂಡು ತಾನು ನಿವೃತ್ತಿ ಹೊಂದಿದ ನಂತರ ಏಕವ್ಯಕ್ತಿ ಸತ್ಯಶೋಧನಾ ಸಮಿತಿ ರಚಿಸಲಾಗಿದೆ. ತನ್ನ ಪೂರ್ವಾಧಿಕಾರಿಗಳ ಅವಧಿಯಲ್ಲಿ ನಡೆದ ಅವ್ಯವಹಾರಗಳ ಕುರಿತು ತನಿಖೆ ನಡೆಸಲು ತಿಳಿಸಿದ್ದರೂ ಸಹ ತನ್ನ ಅವಧಿಗೆ ಮಾತ್ರ ಸಮಿತಿಯು ತನಿಖೆಯನ್ನು ಸೀಮಿತಗೊಳಿಸಿದೆ. ಪ್ರಶ್ನಿತ ಹಣಕಾಸು ನಿರ್ದೇಶಕರ ಹುದ್ದೆಯು 25.6.1990 ರಿಂದಲೇ ಖಾಲಿ ಇತ್ತು. ಅಂದಿನ ವ್ಯವಸ್ಥಾಪಕ ನಿರ್ದೇಶಕರು ಅದನ್ನು ತುಂಬಿರಲಿಲ್ಲ. ಅದರಲ್ಲಿ ತನ್ನ ತಪ್ಪೇನೂ ಇಲ್ಲ. ಶ್ರೀ ಬಿ. ಕೃಷ್ಣಮೂರ್ತಿ ಎಂಬುವರು ಹಣಕಾಸಿನ ನಿರ್ದೇಶಕರಾಗಿದ್ದಾಗ 1987-88 ರಲ್ಲಿ 45.26 ಲಕ್ಷ ರೂಪಾಯಿಗಳು, 1988-89 ರಲ್ಲಿ 67.94 ಲಕ್ಷ ರೂಪಾಯಿಗಳು, 1989-90 ರಲ್ಲಿ 8.74 ಲಕ್ಷ ರೂಪಾಯಿಗಳು ನಿಗಮಕ್ಕೆ ನಷ್ಟ ಉಂಟಾಗಿತ್ತು. ತಾನು ಅಧಿಕಾರದಲ್ಲಿದ್ದಾಗ 1991-92 ರಲ್ಲಿ 152.85 ಲಕ್ಷ 1992-93 ರಲ್ಲಿ 155.85 ಲಕ್ಷ, 1993-94 ರಲ್ಲಿ 171.34 ಲಕ್ಷ, 1994-95 ರಲ್ಲಿ 226.61 ಲಕ್ಷ ರೂಪಾಯಿಗಳ ಲಾಭವನ್ನು ನಿಗಮವು ಗಳಿಸಿದೆ. 1984 ರಿಂದ 1992 ರವರೆಗೆ ಇದ್ದ 5 ಅಧ್ಯಕ್ಷರುಗಳ ಪೈಕಿ ಒಬ್ಬರೂ ಸಹ ಗುತ್ತಿಗೆ ನೀಡುವ ಬಗ್ಗೆ ಇದ್ದ ನೀತಿ ನಿಯಮಗಳನ್ನು ಪಾಲಿಸಿಲ್ಲ. ಹೀಗಿದ್ದೂ ತಮ್ಮೊಬ್ಬರ ಅವಧಿಯನ್ನು ಮಾತ್ರ ಸೇಡಿನ ಮನೋಭಾವದಿಂದ ತನಿಖೆಗೆ ಆಯ್ದುಕೊಳ್ಳಲಾಗಿದೆ. ಸತ್ಯಶೋಧನಾ ಸಮಿತಿಯು ಪರಿಶೀಲಿಸಿರುವ 55 ಪ್ರಕರಣಗಳಲ್ಲಿ ಕಡತ ನಿರ್ಮಾತೃಗಳ ಪೈಕಿ ಯಾರನ್ನೂ ಸಾಕ್ಷಿಗಳನ್ನಾಗಿ ಪರೀಕ್ಷಿಸಿಲ್ಲ. ತಮ್ಮ ಜೊತೆ ಕೆಲಸ ಮಾಡಿದ ಇತರ ಸಿಬ್ಬಂದಿಯನ್ನು ಹೊರತುಪಡಿಸಿ ತನಿಖೆ ನಡೆಸಲಾಗಿದೆ. ತನ್ನ ಪೂರ್ವಾಧಿಕಾರಿಗಳಾದ ಶ್ರೀ ಎಂ.ಬಿ. ಸಿದ್ದಪ್ಪ ಹಾಗೂ ಶ್ರೀ ಜಿ. ವೆಂಕಟೇಶ್ ಅವರುಗಳ ಅವಧಿಯಲ್ಲಿ ಒಟ್ಟು 2700.00 ಲಕ್ಷ ರೂಪಾಯಿಗಳ ಉಪ ಗುತ್ತಿಗೆಗಳನ್ನು ವಹಿಸಲಾಗಿದೆಯೇ ಹೊರತು ತಾನು ಅಧಿಕಾರ ವಹಿಸಿಕೊಂಡ 13.7.1992 ರ ನಂತರ ಯಾವುದೇ ಕಾಮಗಾರಿಯನ್ನು ಉಪಗುತ್ತಿಗೆಗೆ ವಹಿಸಿಲ್ಲ ಹಾಗೂ ತನ್ನ ಅವಧಿಯಲ್ಲಿ ಯಾವುದೇ ಕಳಪೆಕಾಮಗಾರಿ ನಡೆದಿಲ್ಲ. ಆದ್ದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳದೇ ತಮ್ಮನ್ನು ಆರೋಪ ಮುಕ್ತರನ್ನಾಗಿಸಬೇಕೆಂದು ಕೋರಿದ್ದಾರೆ.

ಆರೋಪಿ ನಿವೃತ್ತ ಅಧಿಕಾರಿಯ ಉತ್ತರದಿಂದಾಗಿ ಪ್ರಕರಣವನ್ನು ದಾಖಲೆಗಳೊಡನೆ ಮತ್ತೆ ಪರಿಶೀಲಿಸಲಾಗಿದೆ. ತನ್ನ ವಿರುದ್ಧ ನಡೆದ ಇಲಾಖಾ ವಿಚಾರಣೆಗೆ ಆರೋಪಿಯು ರಾಜಕೀಯ ಕಾರಣಗಳನ್ನು ನೀಡಿದ್ದಾರೆ. ಆದರೆ ವಿಚಾರಣೆಯು ದಾಖಲೆಗಳ ಆಧಾರದ ಮೇಲೆ ನಡೆದಿದ್ದು, ದಾಖಲೆಗಳ ಪರಿಶೀಲನೆಯಿಂದಾಗಿ ಆರೋಪಿಯಿಂದ ಕಾರ್ಯ ವಿಧಾನದ ಉಲ್ಲಂಘನೆ, ಕೆಳಹಂತದ ಅಧಿಕಾರಿಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದಿರುವುದು. ತತ್ಪರಿಣಾಮವಾಗಿ ಕರ್ನಾಟಕ ರಾಜ್ಯ ನಿರ್ಮಾಣ ನಿಗಮವು ಕೋಟ್ಯಾಂತರ ರೂಪಾಯಿಗಳ ನಷ್ಟವನ್ನು ಅನುಭವಿಸಬೇಕಾಗಿ ಬಂದದ್ದು ಇವೇ ವಾಸ್ತವಾಂಶಗಳು ಬೆಳಕಿಗೆ ಬಂದಿವೆ. ಸತ್ಯಶೋಧನಾ ಸಮಿತಿಗೆ ನೆರವಾದ ಗೋಪಾಲಕೃಷ್ಣ, ನಿವೃತ್ತ ಸೂಪರಿಂಟೆಂಡಿಂಗ್ ಇಂಜಿನಿಯರ್ ಹಾಗೂ ಶ್ರೀ ಕೆ. ವಾಸುದೇವರಾವ್, ನಿವೃತ್ತ ವಾಣಿಜ್ಯ ಲೆಕ್ಕಪತ್ರ ನಿರ್ದೇಶಕರುಗಳನ್ನು ಪ್ರಧಾನ ಸಾಕ್ಷಿಗಳನ್ನಾಗಿ ಪರಿಗಣಿಸಿ, ಸತ್ಯಶೋಧನಾ ಸಮಿತಿಯ ವರದಿ ಹಾಗೂ ಅದರಲ್ಲಿ ಉಲ್ಲೇಖಿಸಿದ ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು ವಿಚಾರಣೆ ನಡೆಸಿದ್ದಾರೆ. ನಿಗಮಕ್ಕೆ ಹಣಕಾಸು ನಿರ್ದೇಶಕರ ಅಗತ್ಯವನ್ನು ಮನಗಂಡೇ ಸರ್ಕಾರವು ಅದನ್ನು ಮಂಜೂರು ಮಾಡಿದ್ದರೂ, ಸದರೀ ಹುದ್ದೆಯನ್ನು ಅಸ್ತಿತ್ವದಲ್ಲಿಟ್ಟು ಅದನ್ನು ತುಂಬದೇ ಉಳಿದ ಕ್ರಮ ದುರುದ್ದೇಶದ್ದು. ಲೋಕೋಪಯೋಗಿ ಇಲಾಖೆಯು ನಿರ್ವಹಿಸಬೇಕಾದ ಕಾಮಗಾರಿಗಳನ್ನು ಅದರ ಪರವಾಗಿ ಇಲಾಖಾ ಮಾದರಿಯಲ್ಲಿ ನಿರ್ವಹಿಸುವುದು ನಿಗಮದ ಉದ್ದೇಶವಾಗಿದ್ದರೂ ಸಹ, ಅಲ್ಲದೆ ಸರ್ಕಾರ ನೀಡುವ ಮೊತ್ತದಲ್ಲಿ ಶೇಕಡ 95 ಕ್ಕಿಂತ ಹೆಚ್ಚಿನ ಪಾಲನ್ನು ಉಪಗುತ್ತಿಗೆಗೆ ನೀಡುವ ಪ್ರಸ್ತಾವನೆಯನ್ನು ಮಂಡಳಿಯ ಮುಂದೆ ತರಬೇಕೆಂಬ ನಿಬಂಧನೆಯನ್ನು ಆರೋಪಿಯು ವ್ಯವಸ್ಥಿತವಾಗಿ ಉಲ್ಲಂಘಿಸಿ ತನ್ನ ಹಂತದಲ್ಲೇ ಕಾಮಗಾರಿಗಳನ್ನು ಉಪಗುತ್ತಿಗೆಗೆ ವಹಿಸಿರುವುದು ವಿಚಾರಣೆಯಲ್ಲಿ ಮೂಡಿ ಬಂದಿದೆ. ತನ್ನ ಪೂರ್ವಾಧಿಕಾರಿಗಳು ತೆಗೆದುಕೊಂಡಂತೆಯೇ ತಾನೂ ತೀರ್ಮಾನ ತೆಗೆದುಕೊಂಡಿರುವುದಾಗಿ ಹೇಳಿರುವ ಅವರ ವಾದವು ಒಪ್ಪತಕ್ಕದ್ದಲ್ಲ. ಅವರ ಪೂರ್ವಾಧಿಕಾರಿಗಳು ಮಾಡಿದ ತಪ್ಪನ್ನು ತಾನೂ ಮಾಡಿದ್ದೇನೆ ಎಂದು ಸಮರ್ಥಿಸಿಕೊಳ್ಳುವುದು ಸರಿಯಲ್ಲ. ಗುತ್ತಿಗೆದಾರರ ಹತ್ತಿರ ಕಾಮಗಾರಿಗೆ ಅಗತ್ಯವಾದ ಯಂತ್ರಗಳು ಇವೆಯೇ ಅಥವಾ ಇಲ್ಲವೇ ಎಂಬುದನ್ನು ಖಚಿತಪಡಿಸಿಕೊಳ್ಳದೇ ಉಪಗುತ್ತಿಗೆಗೆ ವಹಿಸಿ ಕಾಮಗಾರಿಯ ವೆಚ್ಚ ಹೆಚ್ಚಾಗುವಂತೆ ಮಾಡಿರುವುದು ವಿಚಾರಣೆಯಲ್ಲಿ ಮೂಡಿ ಬಂದಿದೆ. ತನ್ನ ಅಧೀನ ಅಧಿಕಾರಿ : ನೌಕರರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೇ ತನ್ನ ಹಂತದಲ್ಲೇ ಎಲ್ಲವನ್ನೂ ನಿರ್ವಹಿಸಿರುವುದು, ನಿಗಮಕ್ಕೆ ವಹಿಸಲಾದ ಕಾಮಗಾರಿಗಳನ್ನು ಉಪಗುತ್ತಿಗೆಗೆ ವಹಿಸಿ ನಿಗಮಕ್ಕೆ ಹಾಗೂ ಸರ್ಕಾರಕ್ಕೆ 600.06 ಲಕ್ಷ ರೂಪಾಯಿಗಳ ನಷ್ಟ ಉಂಟು ಮಾಡಿರುವುದು ವಿಚಾರಣೆಯಿಂದ ಮೂಡಿ ಬಂದಿದೆ. ಆದ್ದರಿಂದ ಆರೋಪಿಯು ವಿಚಾರಣಾ ವರದಿಯನ್ನು ಔಪಚಾರಿಕವಾಗಿ ವಿರೋಧಿಸುತ್ತಿದ್ದಾರೆ. ಆದ್ದರಿಂದ ಆರೋಪಿಯ ವಾದವನ್ನು ಒಪ್ಪದೇ ಆರೋಪವು ಸಾಬೀತಾಗಿದೆ ಹಾಗೂ ಸರ್ಕಾರಕ್ಕೆ ಕೋಟ್ಯಾಂತರ ರೂಪಾಯಿಗಳ ನಷ್ಟ ಉಂಟಾಗಿದೆ ಎಂಬ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 34 ಎಸ್‌ಇಎನ್ 95, ಬೆಂಗಳೂರು, ದಿನಾಂಕ: 29ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1) (ಎ) ಹಾಗೂ 118(ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ. ಶಿವಾನಂದ, ನಿವೃತ್ತ ಇಂಜಿನಿಯರ್-ಇನ್-ಚೀಫ್ ಅವರ ನಿವೃತ್ತಿ ಸೌಲಭ್ಯಗಳನ್ನು ಹಾಗೂ ಗಳಿಕೆ ರಜೆ ನಗದೀಕರಣ ಸೌಲಭ್ಯವನ್ನು ಶಾಶ್ವತವಾಗಿ ಹಿಂದಕ್ಕೆ ಪಡೆಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 640

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಎಂ. ಗುಣಶೀಲನ್, ಅಧೀನ ಕಾರ್ಯದರ್ಶಿ, ವಸತಿ ಇಲಾಖೆ (ನಿವೃತ್ತ) ಇವರಿಗೆ ವೇತನ ರಹಿತ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಗಳು ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ವಇ 236 ಹೆಕಾ 2004, ದಿನಾಂಕ: 11.2.2004.

2) ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಗಳು, ವಸತಿ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ವಇ 31 ಯುಹೆಚ್ಎನ್ 2001, (ಭಾಗ-1), ದಿನಾಂಕ: 6.3.2004 ಮತ್ತು 1.4.2004.

**ಪ್ರಸ್ತಾವನೆ:**

ಹೆಚ್ಚುವರಿ ಕಾರ್ಯದರ್ಶಿ, ವಸತಿ ಇಲಾಖೆ ಇವರು ಉಲ್ಲೇಖ (1) (2) ರಲ್ಲಿನ ಅ.ಟಿ. ದಿನಾಂಕ: 11.2.2004, 6.3.2004 ಮತ್ತು 1.4.2004 ರಲ್ಲಿ ಶ್ರೀ ಎಂ. ಗುಣಶೀಲನ್, ಅಧೀನ ಕಾರ್ಯದರ್ಶಿ, ವಸತಿ ಇಲಾಖೆ (ದಿ: 31.3.2004 ರಂದು ವಯೋ ನಿವೃತ್ತಿ ಹೊಂದಿರುವವರು) ಇವರು ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವ ಮೇರೆಗೆ ಶ್ರೀಯುತರು ಅಂಚೆ ಮೂಲಕ ದಿನಾಂಕ: 27.1.2004 ಮತ್ತು ದಿನಾಂಕ: 29.3.2004 ರ ಅವರ ಮನವಿಯಲ್ಲಿ ದಿನಾಂಕ: 1.10.2003 ರಿಂದ 27.3.2004 ರವರೆಗೆ ಒಟ್ಟು 179 ದಿನಗಳು ರಜೆಯನ್ನು ಮಂಜೂರು ಮಾಡುವಂತೆ ಕೋರಿರುವ ರಜೆ ಅರ್ಜಿಗಳನ್ನು ಕಳುಹಿಸಿ, ರಜೆ ಅರ್ಜಿಗಳಲ್ಲಿ ರಜೆ ಮಂಜೂರು ಮಾಡಲು ಸೂಕ್ತ ಶಿಫಾರಸ್ಸನ್ನು ಮಾಡದೆ ಈ ಅಧಿಕಾರಿಯವರು ನಿಗದಿತ ರೀತಿಯಲ್ಲಿ ರಜೆ ಅರ್ಜಿಯನ್ನು ಸಮಯಕ್ಕೆ ಸರಿಯಾಗಿ ಸಲ್ಲಿಸದೇ ಇದ್ದುದರಿಂದ ಅವರ ಗೈರು ಹಾಜರಿಯ ಬಗ್ಗೆ ಶಿಸ್ತಿನ ಕ್ರಮ ಜರುಗಿಸಲು ತಿಳಿಸಿರುತ್ತಾರೆ.

ಶ್ರೀ ಎಂ. ಗುಣಶೀಲನ್, ಅಧೀನ ಕಾರ್ಯದರ್ಶಿ ಇವರು ದಿನಾಂಕ: 1.10.2003 ರಿಂದ 27.3.2004 ರವರೆಗೆ ರಜೆ ಮಂಜೂರು ಮಾಡಲು ಅಂಚೆ ಮೂಲಕ ಕಳುಹಿಸಲಾಗಿರುವ ರಜೆ ಅರ್ಜಿಗಳಲ್ಲಿ ರಜೆ ಮಂಜೂರು ಮಾಡಲು ಹೆಚ್ಚುವರಿ ಕಾರ್ಯದರ್ಶಿ, ವಸತಿ ಇಲಾಖೆ ಇವರು ಶಿಫಾರಸ್ಸು ಮಾಡಿರುವುದಿಲ್ಲವಾದುದರಿಂದ ಹಾಗೂ ಅಧಿಕಾರಿಯವರು ರಜೆ ತೆರಳುವ ಮುಂಚೆ ರಜೆ ಅರ್ಜಿಯನ್ನು ಮೇಲಧಿಕಾರಿಗಳಿಗೆ ಸಲ್ಲಿಸಿ ರಜೆ ಮಂಜೂರಾತಿ ಪಡೆಯದೇ ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವ ಮೇರೆಗೆ ಇವರ ಗೈರು ಹಾಜರಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ಅನುಸಾರ ವೇತನ ರಹಿತ ರಜೆ ಎಂದು ಪರಿಗಣಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 47 ಸಅರ 2004, ಬೆಂಗಳೂರು, ದಿನಾಂಕ: 27ನೇ ಮೇ 2004**

ಶ್ರೀ ಎಂ. ಗುಣಶೀಲನ್, ಅಧೀನ ಕಾರ್ಯದರ್ಶಿ, ವಸತಿ ಇಲಾಖೆ (ದಿ: 31.3.2004 ರಂದು ವಯೋ ನಿವೃತ್ತಿ ಹೊಂದಿರುವವರು) ಇವರು ರಜೆ ತೆರಳುವ ಮುಂಚೆ ರಜೆ ಅರ್ಜಿಯನ್ನು ಸಲ್ಲಿಸಿ, ಮೇಲಧಿಕಾರಿಗಳ ಅನುಮೋದನೆ ಪಡೆಯದೆ ದಿನಾಂಕ: 1.10.2003 ರಿಂದ 27.3.2004 ರವರೆಗೆ ಕಛೇರಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವ ಬಗ್ಗೆ ದಿನಾಂಕ: 1.10.2003 ರಿಂದ 27.3.2004 ರವರೆಗೆ ಒಟ್ಟು 179 ದಿವಸಗಳ ಅವಧಿಯನ್ನು (ನೂರಾ ಎಪ್ಪತ್ತೊಂಬತ್ತು ದಿನಗಳು ಮಾತ್ರ) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ರಡಿಯಲ್ಲಿ ವೇತನ ರಹಿತ ರಜೆ ಎಂದು ಪರಿಗಣಿಸಲಾಗಿದೆ ಹಾಗೂ ಈ ಗೈರು ಹಾಜರಿ ಅವಧಿಯನ್ನು ಅವರ ಖಾತೆಯಲ್ಲಿ ಜಮೆ ಇರುವ 179 ದಿನಗಳು ಅರ್ಧ ವೇತನ ರಜೆಗೆ ಲೆಕ್ಕ ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 641

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ:** ಶ್ರೀ ವಿ.ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಸಂಖ್ಯೆ: ಸಿಆಸುಇ 121 ಎಸ್ಇಎನ್ 2002, ದಿನಾಂಕ: 1.1.2003.

2) ಶ್ರೀ ವಿ.ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ, ಅವರ ಉತ್ತರ ದಿನಾಂಕ: 12.10.2003.

**ಪ್ರಸ್ತಾವನೆ:**

ಶ್ರೀ ವಿ.ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರು ತಮ್ಮ ನಿಜವಾದ ಜನ್ಮ ದಿನಾಂಕ: 6.9.1944 ಆಗಿದ್ದರೂ ಸಹ ಉದ್ದೇಶ ಪೂರ್ವಕವಾಗಿ ಸತ್ಯ ಸಂಗತಿಯನ್ನು ಮುಚ್ಚಿಟ್ಟು 58 ವರ್ಷಗಳ ವಯೋಮಿತಿ ನಂತರವೂ ಸೇವೆಯಲ್ಲಿ ಮುಂದುವರಿಯುವ ದುರುದ್ದೇಶದಿಂದ ತಮ್ಮ ಜನ್ಮ ದಿನಾಂಕವನ್ನು ದಿನಾಂಕ: 6.9.1945 ಎಂದು ಸರ್ಕಾರಕ್ಕೆ ತಪ್ಪು ಮಾಹಿತಿ ನೀಡುವ ಮೂಲಕ ತೀವ್ರ ದುರ್ನಡತೆ ಎಸಗಿದ ಆರೋಪಕಕ್ಕಾಗಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 1.1.2003 ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು. ಈ ನೋಟೀಸ್‌ಗೆ ಆರೋಪಿ ನಿವೃತ್ತ ಅಧಿಕಾರಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ: 12.10.2003 ರ ಉತ್ತರ ನೀಡಿ ಆರೋಪಗಳನ್ನು ನಿರಾಕರಿಸಿದ್ದಾರೆ. ಅವರ ಉತ್ತರವು ಮನಗಾಣಿಸುವ ರೀತಿಯಲ್ಲಿಲ್ಲದಿರುವ ಕಾರಣ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 121 ಎಸ್ಇಎನ್ 2002, ಬೆಂಗಳೂರು, ದಿನಾಂಕ: 29ನೇ ಮೇ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು

ಶ್ರೀ ವಿ.ಬಿ. ಹಿರೇಗೌಡರ್ ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಶ್ರೀ ಸಿ.ಕೆ. ಬಾಲಕೃಷ್ಣ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು 5,000.00 ರೂಪಾಯಿಗಳ ಗೌರವಧನ ಮತ್ತು 1000.00 ರೂಪಾಯಿಗಳ ವಾಹನ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನ ಸಹಾಯಕರು, ಬೆಂಗಳೂರು ಜಿಲ್ಲೆ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ, ಲೇಖನ ಸಾಮಗ್ರಿಗಳನ್ನು ಒದಗಿಸಲು ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 642

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ತೋಟಗಾರಿಕೆ) ಹುದ್ದೆಯನ್ನು ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ: ಡಿಪಿಎಆರ್ 196 ಎಸ್‌ಎಎಸ್ 2004, ದಿನಾಂಕ: 28.4.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 28.4.2004ರ ಅಧಿಸೂಚನೆಯಲ್ಲಿ ಶ್ರೀಮತಿ ಎಲ್. ಶಾಂತಕುಮಾರಿ, ಐ.ಎ.ಎಸ್. ಇವರನ್ನು ಕೃಷಿ ಮತ್ತು ತೋಟಗಾರಿಕೆ ಇಲಾಖೆಯಲ್ಲಿ ಉನ್ನತೀಕರಿಸಲಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ (ತೋಟಗಾರಿಕೆ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ. ಹಾಗೂ ಇವರು ದಿನಾಂಕ: 29.4.2004 ರಂದು ಈ ಹುದ್ದೆಯಲ್ಲಿ ಕಾರ್ಯ ವರದಿ ಮಾಡಿಕೊಂಡಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಕೃಷಿ ಮತ್ತು ತೋಟಗಾರಿಕೆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಕಾರ್ಯದರ್ಶಿ (ತೋಟಗಾರಿಕೆ) ಹುದ್ದೆಯನ್ನು ಶ್ರೀಮತಿ ಎಲ್. ಶಾಂತಕುಮಾರಿ, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕ: 29.4.2004 ರಿಂದ ಜಾರಿಗೆ ಬರುವಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ ಹುದ್ದೆ ಎಂದು ಮರು ಪದನಾಮೀಕರಿಸುವ ಅಗತ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 39 ಸಸಿವಿ 2004, ಬೆಂಗಳೂರು, ದಿನಾಂಕ: 31ನೇ ಮೇ 2004**

ಕರ್ನಾಟಕ ಸರ್ಕಾರದ ಸಚಿವಾಲಯದ ಕೃಷಿ ಮತ್ತು ತೋಟಗಾರಿಕೆ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ತೋಟಗಾರಿಕೆ) ಹುದ್ದೆಯನ್ನು ಶ್ರೀಮತಿ ಎಲ್. ಶಾಂತಕುಮಾರಿ, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕ: 29.4.2004 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ : ಕಾರ್ಯದರ್ಶಿ (ತೋಟಗಾರಿಕೆ) ಹುದ್ದೆ ಎಂದು ಮರುಪದನಾಮೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಕಡತ ಸಂಖ್ಯೆ: ಸಿಆಸುಇ 85 ಸಸಿವಿ 2003ರ ಟಿಪ್ಪಣಿ ಕಂಡಿಕೆ 7 ರಲ್ಲಿ ನೀಡಿರುವ ಸಹಮತಿ (ಟಿಪ್ಪಣಿ ಸಂಖ್ಯೆ: ಆಇ 2014 ವೆಚ್ಚ-5:2003, ದಿನಾಂಕ: 27.11.2003) ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 643

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ:** ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಆದೇಶ ಕ್ರಮಾಂಕ: ಸಿಆಸುಇ 77 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 29ನೇ ಮೇ 2004**

ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಅವರು ತುಂಗಾ ಮೇಲ್ದಂಡೆ ಯೋಜನಾ ವಲಯ, ಕರ್ನಾಟಕ ನೀರಾವರಿ ನಿಗಮ, ಶಿವಮೊಗ್ಗ ಇಲ್ಲಿ 12.7.1999 ರಿಂದ 31.5.2000 ದವರೆಗೆ ಕಾರ್ಯ ನಿರ್ವಹಿಸುತ್ತಿದ್ದಾಗ ಯೋಜನೆಯ ಮುಖ್ಯ ಕಾಲುವೆ ಚೈನೇಜ್ 11 ರಿಂದ 35ನೇ ಕಿ.ಮೀ. ವರೆಗಿನ ಮಣ್ಣು ಅಗೆತ ಹಾಗೂ ಅಡ್ಡಮೋರಿ ಕಾಮಗಾರಿಗಳ ಅಂದಾಜು ಪಟ್ಟಿಗೆ ಮಂಜೂರಾತಿ ನೀಡುವಲ್ಲಿ ಅವಶ್ಯಕವಾದ ಐಟಂಗಳನ್ನು ಸೇರಿಸದೇ ನಿಗಮಕ್ಕೆ ಕೋಟ್ಯಾಂತರ ರೂಪಾಯಿಗಳ ಅಧಿಕ ವೆಚ್ಚ ಉಂಟಾಗಲು ಕಾರಣರಾಗಿ ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 644

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** 2003-04ನೇ ಸಾಲಿನಲ್ಲಿ ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಯಡಿಯ ಉಳಿತಾಯದ ಹಣವನ್ನು ಕೇಂದ್ರ ಮಂತ್ರಾಲಯದ ಪರಿಸರ ಮತ್ತು ಅರಣ್ಯ ಸಚಿವಾಲಯಕ್ಕೆ ಮರು ಪಾವತಿಸುವ ಮತ್ತು ಲೆಕ್ಕವನ್ನು ಹೊಂದಾಣಿಕೆ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆ:**
1) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 8(2)-92002-ಪಿಟಿ ದಿನಾಂಕ: 31.12.2002.
2) ಸರ್ಕಾರಿ ಆದೇಶ ಸಂಖ್ಯೆ: ಅಪಜೀ 123 ಎಫ್‌ಡಿಎಸ್ 2002, ದಿನಾಂಕ: 29.8.2003.
3) ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: 8(2)-92002-ಪಿಟಿ ದಿನಾಂಕ: 3.2.2004.
4) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿ1/ಸಿಆರ್-43/ಬಿಯುಡಿ/1998-99, ದಿನಾಂಕ: 27.4.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕೇಂದ್ರ ಸರ್ಕಾರವು ವಿಶ್ವಬ್ಯಾಂಕಿನ ನೆರವಿನಿಂದ ಅನುಷ್ಠಾನಗೊಂಡಿರುವ ಕೇಂದ್ರ ಪುರಸ್ಕೃತ ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಯಡಿ 2002-2003ನೇ ಸಾಲಿನಲ್ಲಿ 2ನೇ ಕಂತಾಗಿ ರೂ. 542.33 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಸದರಿ ಮೊತ್ತವು ರಾಜ್ಯ ಸರ್ಕಾರಕ್ಕೆ ಜಮೆ ಆಗಿರುವ ಬಗ್ಗೆ ಆರ್ಥಿಕ ಇಲಾಖೆಯು ದಿನಾಂಕ: 30.1.2003 ರಂದು ಕ್ರೆಡಿಟ್ ಕನ್‌ಫಾರ್ಮೇಶನ್ ಸ್ಲಿಪ್ ನೀಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಕೇಂದ್ರ ಪುರಸ್ಕೃತ ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಯಡಿ 2003-04ನೇ ಸಾಲಿನಲ್ಲಿ ನವೀಕರಿಸಿದ 2ನೇ ಕಂತಿನ ಮೊತ್ತ ರೂ. 542.33 ಲಕ್ಷಗಳನ್ನು ನಾಗರಹೊಳೆ ರಾಷ್ಟ್ರೀಯ ಉದ್ಯಾನವನದ ಅಭಿವೃದ್ಧಿಗಾಗಿ 2003-04ನೇ ಸಾಲಿನ ಮೊದಲ ತ್ರೈಮಾಸಿಕಕ್ಕೆ ಮಂಜೂರಾದ ಕಾಮಗಾರಿಗಳಿಗೆ ಮಾತ್ರ ಉಪಯೋಗಿಸಿಕೊಳ್ಳಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಕೇಂದ್ರ ಪುರಸ್ಕೃತ ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಯಡಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನದಲ್ಲಿ ವೆಚ್ಚವಾಗದೆ ಬಾಕಿ ಉಳಿದಿರುವ ಮೊತ್ತ ರೂ. 225.94 ಲಕ್ಷವನ್ನು ಕೇಂದ್ರ ಸರ್ಕಾರದ ಲೆಕ್ಕಕ್ಕೆ ವರ್ಗಾವಣೆ ಮಾಡಲು ನಿರ್ದೇಶಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ 2003-04ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಕೇಂದ್ರ ಪುರಸ್ಕೃತ ಯೋಜನೆ ಲೆಕ್ಕಶೀರ್ಷಿಕೆ 2406-02-110-0-40-ಇಂಡಿಯಾ ಇಕೋ ಡೆವಲಪ್‌ಮೆಂಟ್ ಪ್ರಾಜೆಕ್ಟ್-139-ಮೇಜರ್ ವರ್ಕ್ಸ್ ಇದರಡಿ ರೂ. 750.00 ಲಕ್ಷ ಅನುದಾನಕ್ಕೆ ಅವಕಾಶ ಕಲ್ಪಿಸಿದ್ದು, ಕೇಂದ್ರ ಸರ್ಕಾರವು 2002-03ನೇ ಸಾಲಿನಲ್ಲಿ ದಿನಾಂಕ: 31.12.2002 ರಂದು ಬಿಡುಗಡೆ ಮಾಡಿರುವ ರೂ. 542.33 ಲಕ್ಷವನ್ನು ನವೀಕರಿಸಿ, 2003-04ನೇ ಸಾಲಿನಲ್ಲಿ ವೆಚ್ಚ ಮಾಡಲು ಅನುಮತಿ ಕೊಡಲಾಗಿದ್ದು, ಸದರಿ ಯೋಜನೆಗೆ ಕೇಂದ್ರ ಪುರಸ್ಕೃತ ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಗೆ ವಿದೇಶಿ ನೆರವಿದ್ದರೂ ಸಹ ಈ ಯೋಜನೆಯನ್ನು ಕೇಂದ್ರ ಪುರಸ್ಕೃತ ಯೋಜನೆಯಾಗಿ ಅನುಷ್ಠಾನಗೊಳಿಸಲಾಗಿದ್ದು, ಈ ಯೋಜನೆಯ ಅನುಷ್ಠಾನದ ಅವಧಿಯು 2002-03ನೇ ಸಾಲಿಗೆ ಕೊನೆಗೊಂಡಿರುತ್ತದೆ. ಆದರೆ ದಿನಾಂಕ: 31.12.2002 ರಂದು ಬಿಡುಗಡೆ ಮಾಡಿರುವ ಅನುದಾನವನ್ನು ಸಕಾಲದಲ್ಲಿ ಬಳಸಿಕೊಳ್ಳಲಾಗದಿದ್ದ ಕಾರಣ, ವಿಶ್ವಬ್ಯಾಂಕ್‌ನ ಆರ್ಥಿಕ ಪತ್ರ ದಿನಾಂಕ: 13.6.2003 ರಲ್ಲಿ ಸದರಿ ಯೋಜನೆಯಡಿ ವೆಚ್ಚವನ್ನು ದಿನಾಂಕ: 30.6.2003 ರವರೆಗೆ ಭರಿಸಲು ಹಾಗೂ ಈ ಯೋಜನೆಯ ಲೆಕ್ಕಪತ್ರಗಳನ್ನು ದಿನಾಂಕ: 31.10.2003 ರೊಳಗೆ ಅಂತಿಮಗೊಳಿಸಲು ಕಾಲಾವಧಿ ನಿಗದಿಪಡಿಸಲಾಗಿದ್ದು, ಪರಿಸರ ಮತ್ತು ಅರಣ್ಯ ಸಚಿವಾಲಯ (ಪ್ರಾಜೆಕ್ಟ್ ಟೈಗರ್), ಭಾರತ ಸರ್ಕಾರ, ನವದೆಹಲಿ ಇವರ ಪತ್ರಸಂಖ್ಯೆ: 8(2)-92002-ಪಿಟಿ, ದಿನಾಂಕ: 3.2.2004 ರಲ್ಲಿ ಮೇಲ್ಕಂಡ ಯೋಜನೆಯಲ್ಲಿ ವೆಚ್ಚವಾಗದೆ ಉಳಿದಿರುವ ಹಣವನ್ನು ಚೆಕ್ ಅಥವಾ ಡಿ.ಡಿ. ಮೂಲಕ ಮಿನಿಸ್ಟ್ರಿ ಆಫ್ ಎನ್‌ವಿರಾನ್‌ಮೆಂಟ್ ಅಂಡ್ ಫಾರೆಸ್ಟ್, ನವದೆಹಲಿ ಇವರಿಗೆ ಹಣ ಹಿಂಪಾವತಿಸಲು ಸೂಚಿಸಲಾಗಿದೆ. ಯೋಜನೆಯ ಅನುಷ್ಠಾನಾಧಿಕಾರಿಗಳಾದ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಹುಣಸೂರು ಇವರು ಕೇಂದ್ರ ಪುರಸ್ಕೃತ ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಯಡಿ 2003-04ನೇ ಸಾಲಿಗೆ ಹಂಚಿಕೆ ಮಾಡಿದ/ವೆಚ್ಚ ಮಾಡಲು ಅನುಮತಿ ನೀಡಿದ್ದ ಮೊತ್ತದಲ್ಲಿ ರೂ. 225.94 ಲಕ್ಷವನ್ನು ವೆಚ್ಚ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ಈ ಮೊತ್ತವನ್ನು ಕೇಂದ್ರ ಮಂತ್ರಾಲಯದ ಪರಿಸರ ಮತ್ತು ಅರಣ್ಯ ಸಚಿವಾಲಯಕ್ಕೆ ಪಾವತಿಸಲು ಮುಂದಿನ ಕ್ರಮ ತೆಗೆದುಕೊಳ್ಳುವಂತೆ ಕೋರಿರುವುದಾಗಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಗಣಿಸಲಾಗಿದ್ದು, ಕೇಂದ್ರ ಪುರಸ್ಕೃತ ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಯಡಿ 2003-04ನೇ ಸಾಲಿನ ಆಯವ್ಯಯ ಅಂದಾಜಿನಲ್ಲಿ ಅವಕಾಶ ಕಲ್ಪಿಸಿದ ಮೊತ್ತದಲ್ಲಿ ವೆಚ್ಚವಾಗದೆ ಉಳಿದಿರುವ ಮೊತ್ತ ರೂ. 225.94 ಲಕ್ಷವನ್ನು ಕೇಂದ್ರ ಸರ್ಕಾರದ ಪರಿಸರ ಮತ್ತು ಅರಣ್ಯ ಸಚಿವಾಲಯಕ್ಕೆ ಹಿಂದಿರುಗಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 02 ಎಫ್‌ಡಿಎಸ್ 2004, ಬೆಂಗಳೂರು, ದಿನಾಂಕ: 16ನೇ ಜೂನ್ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಇಂಡಿಯಾ ಇಕೋ ಡೆವಲಪ್‌ಮೆಂಟ್ ಯೋಜನೆಯಡಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನದಲ್ಲಿ ವೆಚ್ಚವಾಗದೆ ಬಾಕಿ ಉಳಿದಿರುವ ಮೊತ್ತ ರೂ. 225.94 ಲಕ್ಷವನ್ನು ಕೇಂದ್ರ ಸರ್ಕಾರಕ್ಕೆ ಹಿಂತಿರುಗಿಸುವ ಸಲುವಾಗಿ ಪೇ ಅಂಡ್ ಅಕೌಂಟ್ಸ್ ಆಫೀಸರ್, ಮಿನಿಸ್ಟ್ರಿ ಆಫ್ ಎನ್‌ವಿರಾನ್ಮೆಂಟ್ ಅಂಡ್ ಫಾರೆಸ್ಟ್ ನವದೆಹಲಿ ಇವರಿಗೆ ಹಿಂದಿರುಗಿಸಲು ಮಂಜೂರಾತಿ ನೀಡಲಾಗಿದೆ.

2. ಪೇ ಅಂಡ್ ಅಕೌಂಟ್ಸ್ ಆಫೀಸರ್, ಮಿನಿಸ್ಟ್ರಿ ಆಫ್ ಎನ್‌ವಿರಾನ್ಮೆಂಟ್ ಅಂಡ್ ಫಾರೆಸ್ಟ್ ನವದೆಹಲಿ ಇವರಿಗೆ ಪಾವತಿಸಬೇಕಾದ ಮೊತ್ತವನ್ನು ಫಾರೆಸ್ಟ್ ಚೆಕ್ ಮೂಲಕ/ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿಡಿ ಪಡೆದು ಹಿಂತಿರುಗಿಸುವುದು.

3. ಕೇಂದ್ರ ಸರ್ಕಾರದ ಸಹಯಾನುದಾನದ ಮೊತ್ತ ರೂ. 225.94 ಲಕ್ಷವನ್ನು ಮಿನಿಸ್ಟ್ರಿ ಆಫ್ ಎನ್‌ವಿರಾನ್ಮೆಂಟ್ ಅಂಡ್ ಫಾರೆಸ್ಟ್ ನವದೆಹಲಿ ಇವರಿಗೆ ಮರುಪಾವತಿಸುವ ಮೊತ್ತವನ್ನು ಹುಣಸೂರು ವನ್ಯ ಜೀವಿ ವಿಭಾಗದ ನಗದು ಪುಸ್ತಕದಲ್ಲಿ Receipt side ನಡಿ ರಾಜಸ್ವ ಲೆಕ್ಕ ಶೀರ್ಷಿಕೆ 1601-04-900-0-00-ವಜಾ ವಾಪಸಾತಿ ಎಂದು ಖರ್ಚು ಹಾಕಿ, 8782-00-101-0-01-ಫಾರೆಸ್ಟ್ ಚೆಕ್‌ನಡಿ ಸ್ವೀಕೃತಿಯೆಂದು ಲೆಕ್ಕ ಹೊಂದಾಣಿಕೆ ಮಾಡಿಕೊಳ್ಳುವುದು. ರಾಜಸ್ವ ಲೆಕ್ಕ ಶೀರ್ಷಿಕೆ 1601-04-900-0-00-ವಜಾ ವಾಪಸಾತಿ ಇದನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ ಹುಣಸೂರು ಇವರು ತಮ್ಮ ನಗದು ಪುಸ್ತಕದಲ್ಲಿ ಹೊಸದಾಗಿ ಸೇರ್ಪಡೆ ಮಾಡಿ ಖರ್ಚು ಹಾಕಲು ಈ ಮೂಲಕ ಅನುಮತಿ ನೀಡಲಾಗಿದೆ ಹಾಗೂ ಈ ಲೆಕ್ಕ ಹೊಂದಾಣಿಕೆಯನ್ನು One time transaction ಎಂದು ಪರಿಗಣಿಸುವುದು.

4. ಮೇಲ್ಕಂಡ ಲೆಕ್ಕ ಪತ್ರದ ಹೊಂದಾಣಿಕೆಯನ್ನು ಫೆಬ್ರವರಿ-2004ರ ಮಾಹೆಯ ಲೆಕ್ಕ ಪತ್ರದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯ ಜೀವಿ ವಿಭಾಗ ಹುಣಸೂರು ಇವರು ಆಚರಣೆಗೆ ತಂದು ಮಹಾಲೇಖಪಾಲರಿಗೆ ಪರಿಷ್ಕೃತ ಲೆಕ್ಕ ಪತ್ರವನ್ನು ಸಲ್ಲಿಸುವಂತೆ ತಿಳಿಸಿದೆ.

5. ಈ ಆದೇಶದನ್ವಯ ಮಹಾಲೇಖಪಾಲರು, ಬೆಂಗಳೂರು ಇವರು, ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯ ಜೀವಿ ವಿಭಾಗ ಹುಣಸೂರು ಇವರಿಗೆ ಸಂಬಂಧಿಸಿದ ಫೆಬ್ರವರಿ-2004ರ ಮಾಹೆಯ ಪರಿಷ್ಕೃತ ಲೆಕ್ಕ ಪತ್ರವನ್ನು ಅಂಗೀಕರಿಸಲು ಕ್ರಮ ತೆಗೆದುಕೊಳ್ಳುವುದು.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ-428/ವೆಚ್ಚ-2/2004, ದಿನಾಂಕ: 4.6.2004 ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 645

**ಎಸ್.ಆರ್. ವತ್ಸಲ**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ನಅಇ 243 ಮೈಅಪ್ರಾ 2004, ಬೆಂಗಳೂರು, ದಿನಾಂಕ: 11ನೇ ಜೂನ್ 2004**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ, 1987 (ಕರ್ನಾಟಕ ಕಾಯ್ದೆ ಸಂಖ್ಯೆ. 34, 1997) ರ ಕಾಯ್ದೆ 3(3)(ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದಲ್ಲಿ ವಿವರಿಸಿರುವಂತೆ ನಗರಾಭಿವೃದ್ಧಿ ಪ್ರಾಧಿಕಾರಗಳ ಪೂರ್ತಿ ಅಥವಾ ಭಾಗಶಃ ವ್ಯಾಪ್ತಿಯಲ್ಲಿ ಬರುವ ವಿಧಾನಸಭಾ ಸದಸ್ಯರುಗಳು ಹಾಗೂ ಪ್ರಾಧಿಕಾರಗಳ ವ್ಯಾಪ್ತಿಯಲ್ಲಿ ಖಾಯಂ ಆಗಿ ವಾಸಿಸುತ್ತಿರುವ ವಿಧಾನ ಪರಿಷತ್ತಿನ ಸದಸ್ಯರುಗಳು ಸಂಬಂಧಪಟ್ಟ ನಗರಾಭಿವೃದ್ಧಿ ಪ್ರಾಧಿಕಾರಗಳ ಸದಸ್ಯರುಗಳಾಗಿ ಅವರ ಸದಸ್ಯತ್ವದ ಅವಧಿ ಮುಗಿಯುವವರೆಗೂ ಮುಂದುವರಿಯುತ್ತಾರೆ.

ಪಿ.ಆರ್. 646

**ವಿ. ಶ್ರೀಧರಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## PERSONNEL AND ADMINISTRATIVE REFORMS SECRETARIAT

**Sub:** Constitution of the post of Secretary to Government (Forests) Forest, Ecology and Environment Department

**Read:**
1. G.O. No. DPAR 17 SFP 81, dated 31.1.1981.
2. G.O. No. DPAR 63 SFP 82, dated 19/26.5.1982.
3. G.O. No. DPAR 25 SFP 83, dated 19.3.83 and 28.2.84.
4. G.O. No. DPAR 28 SFP 85, dated 12.3.1985.
5. G.O. No. DPAR 26 SFP 86, dated 15.4.1986.
6. G.O. No. DPAR 85 SFP 87, dated 1.4.1987.
7. G.O. No. DPAR 101 SFP 87, dated 3.5.1988.
8. G.O. No. DPAR 52 SFP 89, dated 13.6.1989.
9. G.O. No. DPAR 35 SFP 90, dated 30.4.1990.
10. G.O. No. DPAR 26 SFP 91, dated 5.4.1991.
11. G.O. No. DPAR 76 SFP 92, dated 8.6.1992.
12. G.O. No. DPAR 51 SFP 94, dated 13.4.1994.
13. G.O. No. DPAR 13 SFP 95, dated 1.3.1995.
14. G.O. No. DPAR 51 SFP 94, dated 7.9.1996.

15. G.O. No. DPAR 49 SFP 98, dated 25.6.1998.
16. Govt. Notification DPAR 264 SAS 98 dated 10.5.99.
17. G.O. No. DPAR 66 SFP 2000 dated 8.6.2000.
18. G.O. No. DPAR 50 SFP 02, dated 3.5.2002.

**Preamble:**

In the G.O. read (1) above sanction was accorded for the creation of post of Special Secretary to Government, Animal Husbandry, Fisheries and Forests Department (presently Forest, Ecology and Environment Department) for a period of one year from 31.3.81 and continued from time to time vide G.O. No. read at (2) to (12) above. In G.O. dated 1.3.95 read at (13) above, the post of Special Secretary to Government (Forest) Forest, Ecology and Environment Department was redesignated as Secretary to Government 2 (Forests), Forest, Ecology and Environment Department. Further in G.O. read dated 3.5.2002 at (18) above sanction was accorded for continuance of the said post for further period for two years with effect from 1.4.2002. This post was further re-redesignated as Secretary (Forests) in G.O. read at (16) above. Since the currency of the said post expired on 31.3.2004 it is considered necessary to continue the said post for a further period of two years from 1.4.2004. Hence the following order.

**Govt. Order No. DPAR 65 SFP 2004, Bangalore, Dated 27th May 2004**

Sanction is accorded to the continuance of the post of Secretary to Government (Forests) Forest, Ecology and Environment Department, for a further period of two years with effect from 1.4.2004 or until further orders whichever is earlier.

This order issued presuming the concurrence of Finance Department in terms of G.O. No. FD 1 TFP 96, dated 10.7.1996.

By Order and in the Name of the Governor of Karnataka

**B.V. Kumaraswamy**

Under Secretary to Government

Department of Personnel and Administrative Reforms (services-I).

PR-647

**ಕಾನೂನು ಸಚಿವಾಲಯ**

**ವಿಷಯ:** ರಾಜ್ಯದಲ್ಲಿನ ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಈ ಕುರಿತಂತೆ ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರಿಂದ ಸ್ವೀಕರಿಸಲಾದ ಪ್ರಸ್ತಾವನೆಗಳು.

**ಪ್ರಸ್ತಾವನೆ:**

ಅನುಬಂಧದಲ್ಲಿ ಹೆಸರಿಸಲಾಗಿರುವ ರಾಜ್ಯದಲ್ಲಿನ 68 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2004 ಕ್ಕೆ ಪೂರ್ಣಗೊಂಡಿದ್ದು, ಈ ನ್ಯಾಯಾಲಯಗಳು 5-10 ವರ್ಷಗಳಿಗೂ ಹೆಚ್ಚು ಕಾಲದಿಂದ ಅಸ್ತಿತ್ವದಲ್ಲಿದ್ದು ಅಧಿಕ ಸಂಖ್ಯೆಯಲ್ಲಿ ಪ್ರಕರಣಗಳು ಬಾಕಿ ಇರುವುದರಿಂದ ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ ಖಾಯಂಗೊಳಿಸಲು ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರು ಕೋರಿದ್ದಾರೆ.

ಈ ನ್ಯಾಯಾಲಯಗಳು ಸುಸೂತ್ರವಾಗಿ ಕಾರ್ಯನಿರ್ವಹಿಸಲು ಮತ್ತು ಪ್ರಿಸೈಡಿಂಗ್ ಅಧಿಕಾರಿ ಮತ್ತು ಸಿಬ್ಬಂದಿ ವರ್ಗಕ್ಕೆ ವೇತನ ಮತ್ತು ಇತರೆ ಭತ್ಯೆಗಳಿಗೆ ತೊಂದರೆಯಾಗದಂತೆ ಒಂದು ವರ್ಷದ ಅವಧಿಗೆ ಅಥವಾ ಈ ವಿಷಯದಲ್ಲಿ ಮುಂದಿನ ಆದೇಶ ಹೊರಡಿಸುವವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮತ್ತು ಏತನ್ಮಧ್ಯೆ ಖಾಯಂಗೊಳಿಸುವ ಬಗ್ಗೆ ಪರಿಶೀಲಿಸಲು ತೀರ್ಮಾನಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ಬೆಂಗಳೂರು, ದಿನಾಂಕ: 18ನೇ ಮೇ 2004**

ಅನುಬಂಧದಲ್ಲಿ ತಿಳಿಸಲಾದ ರಾಜ್ಯದ 68 ವಿವಿಧ ಅಧೀನ ನ್ಯಾಯಾಲಯಗಳ ಕಾರ್ಯಾವಧಿಯನ್ನು ಅವುಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2004 ರಿಂದ ಒಂದು ವರ್ಷದ ಅವಧಿಗೆ ಅಥವಾ ಈ ವಿಷಯದಲ್ಲಿ ಮುಂದಿನ ಆದೇಶ ಹೊರಡಿಸುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

ಅನುಬಂಧದಲ್ಲಿನ ಕ್ರಮ ಸಂಖ್ಯೆ 1, 3 ರಿಂದ 8 ಮತ್ತು 29 ರಲ್ಲಿ ನಮೂದಿಸಿರುವ ನ್ಯಾಯಾಲಯಗಳಿಗೆ ಸಂಬಂಧಿಸಿದಂತೆ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-108-0-01 ಯೋಜನೇತರ" ಅಡಿಯಲ್ಲಿಯೂ, ಕ್ರಮ ಸಂಖ್ಯೆ 2, 9 ರಿಂದ 28, 30 ರಿಂದ 39, 43 ರಿಂದ 58, 60 ರಿಂದ 68 ರಲ್ಲಿನ ನ್ಯಾಯಾಲಯಗಳಿಗೆ "2014-00-105-0-01 ಯೋಜನೇತರ" ಅಡಿಯಲ್ಲಿಯೂ ಕ್ರಮ ಸಂಖ್ಯೆ 40, 41 ಹಾಗೂ 42 ರಲ್ಲಿನ ನ್ಯಾಯಾಲಯಗಳಿಗೆ "2014-00-117-0-00 ಯೋಜನೇತರ" ಅಡಿಯಲ್ಲಿ ಮತ್ತು ಕ್ರಮ ಸಂಖ್ಯೆ 59 ರಲ್ಲಿನ ನ್ಯಾಯಾಲಯಕ್ಕೆ ಸಂಬಂಧಿಸಿದಂತೆ ಲೆಕ್ಕ ಶೀರ್ಷಿಕೆ "2014-00-106-0-01 ಯೋಜನೇತರ" ಅಡಿಯಲ್ಲಿ ಕ್ರಮವಾಗಿ ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96ರ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಕಾನೂನು ಇಲಾಖೆ (ಆಡಳಿತ-1)

**ANNEXURE TO GO No. LAW 38 LAC 2004, Dated 18-5-2004**
**List of Courts continued on temporary basis from 1-4-2004**
**for a further period of ONE YEAR**

| Sl. No. | Name of the Court |
|---|---|
| 1. | 12th to 16th Addl. Chief Metropolitan Magistrate Courts, Bangalore |
| 2. | Special Court for Economic off ences, Bangalore |
| 3. | VII to XI Addl. C.M.M. Bangalore |
| 4. | Metropolitan Magistrate, Traffic Court-III, Bangalore |
| 5. | IV Addl. C.M.M., Bangalore |
| 6. | V Addl. C.M.M., Bangalore |
| 7. | VI Addl. C.M.M., Bangalore |
| 8. | III Addl. C.M.M., Bangalore |
| 9. | Special Court at Bangalore for trial of NDPS cases (XXXIII Addl. City and Sessions Judge) |
| 10. | XXIII Addl. City Civil & Sessions Judge, Bangalore for prevention of corruption Act. |
| 11. | 24th to 31st Addl. City Civil & Sessions Judge, Bangalore |
| 12. | XXI Addl. City Civil & Sessions Judge, Bangalore for CBI cases |
| 13. | XXII Addl. City Civil and Sessions Judge, Bangalore for Atrocities on women |
| 14. | II Addl. District Judge, Gulbarga, for trial of SC/ST cases |
| 15. | Civil Judge (Jr.Dn.) & JMFC, Jewargi |
| 16. | Addl. Civil Judge (Sr.Dn.) & CJM, Gulbarga |
| 17. | III Addl. Civil Judge (Jr.Dn.) & JMFC, Gulbarga |
| 18. | Civil Judge (Jr.Dn.) & JMFC, Shahabad |
| 19. | Civil Judge (Jr.Dn.) & JMFC, Afzalpur |
| 20. | III Addl. District and Sessions Court, Mysore for Prevention of Corruption Act |
| 21. | Addl. Civil Judge (Jr.Dn.) & JMFC, Kollegal |
| 22. | Addl. Civil Judge (Jr.Dn.) & JMFC, Chamarajanagar |
| 23. | Civil Judge (Jr.Dn.) & JMFC, Yelandur |
| 24. | Civil Judge (Jr.Dn.) & JMFC, Heggadadevanakote |
| 25. | Civil Judge (Jr.Dn.) & JMFC, Gundlupet |
| 26. | IV Addl. I Civil Judge (Jr.Dn.) Mysore |
| 27. | III Addl. I Civil Judge (Jr.Dn.) Mysore |
| 28. | V Addl. I Civil Judge (Jr.Dn.) Mysore |
| 29. | JMFC (III Court) Mysore |
| 30. | Addl. Civil Judge (Jr.Dn.) & JMFC, Nanjanagud |
| 31. | II Addl. District Judge, Mysore |
| 32. | Civil Judge (Jr.Dn.) & JMFC, Piriyapatna |
| 33. | I Addl. District and Sessions Judge, Tumkur |
| 34. | III Addl. Civil Judge (Jr.Dn.) & JMFC IV Court, Tumkur |
| 35. | Civil Judge (Jr.Dn.) & JMFC, Turuvekere |
| 36. | Civil Judge (Jr.Dn.) & JMFC, Koratagere |
| 37. | Addl. Civil Judge (Jr.Dn.) & JMFC, Tiptur |
| 38. | Civil Judge (Jr.Dn.) & JMFC, Gudibanda |
| 39. | I Addl. District and Sessions Judge, Kolar |
| 40. | Prl. Judge, Family Court, Bangalore |
| 41. | I Addl. Prl. Judge, Family Court, Bangalore |
| 42. | II Addl. Prl. Judge, Family Court, Bangalore |
| 43. | Civil Judge (Jr.Dn.) & JMFC, Koppa |
| 44. | Civil Judge (Jr.Dn.) & JMFC, Sringeri |
| 45. | III Addl. District and Sessions Judge, D.K., Mangalore |
| 46. | IV District and Sessions Judge, Bijapur for Prevention of Corruption Act |
| 47. | II Addl. District and Sessions Judge, Bijapur for trial of SC/ST cases |
| 48. | II Addl. Civil Judge (Sr.Dn.) Bijapur to deal with LAC cases |
| 49. | Civil Judge (Jr.Dn.) & JMFC, Sandur |
| 50. | Civil Judge (Jr.Dn.) & JMFC, Hagaribommanahalli |
| 51. | II Addl. Civil Judge (Jr.Dn.) Bellary |
| 52. | Addl. Civil Judge (Sr.Dn.) Bellary |
| 53. | Addl. District Judge, Bellary |

| Sl. No. | Name of the Court |
|---|---|
| 54. | Civil Judge (Jr.Dn.) & JMFC, Mundargi |
| 55. | III Addl. Civil Judge (Jr.Dn.) Gadag |
| 56. | Civil Judge (Jr.Dn.) & JMFC, Nargund |
| 57. | II Addl. Civil Judge (Jr.Dn.) Karkala |
| 58. | Addl. Civil Judge (Sr.Dn.) Udupi |
| 59. | V Addl. Court of Small Causes, Bangalore |
| 60. | Addl. Civil Judge (Jr.Dn.) & JMFC, Chikkaballapur |
| 61. | Civil Judge (Jr.Dn.) & JMFC, Alur |
| 62. | Addl. Civil Judge (Jr.Dn.) & JMFC, Gangavathi |
| 63. | Civil Judge (Jr.Dn.) & JMFC, Mudigere |
| 64. | Addl. Civil Judge (Jr.Dn.) & JMFC, Chikkamagalur |
| 65. | Civil Judge (Jr.Dn.) & JMFC, Mandgod |
| 66. | Addl. Civil Judge (Sr.Dn.) Karwar |
| 67. | Addl. Civil Judge (Jr.Dn.) & JMFC, Sindhanur |
| 68. | Civil Judge (Jr.Dn.) & JMFC, Byadgi |

**A.P. Ramakrishna**
PR-648 Under Secretary to Government (I/C)
Law Department (Admn-1).

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಎಸ್.ಆರ್.ಎಸ್. ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಗುಲ್ಬರ್ಗಾ ಜಿಲ್ಲೆಯ, ಶಹಪುರ ತಾಲ್ಲೂಕಿನ ಕದ್ರಪುರ ಗ್ರಾಮದ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಲಾದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು 10 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 13 ಎನ್‌ಸಿಇ 2004, ದಿನಾಂಕ: 13.2.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಗುಗಲ್/2004/1046, ದಿನಾಂಕ: 14.6.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಎಸ್.ಆರ್.ಎಸ್. ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಕದ್ರಪುರ ಗ್ರಾಮದ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಯೋಜನೆಯು ಹಂಚಿಕೆ ಆಗಿರುವ ಸ್ಥಳದಲ್ಲಿ ನೀರಿನ ಹರಿವು 25 ಕ್ಯೂಮೆಕ್ಸ್‌ನಿಂದ 50 ಕ್ಯೂಮೆಕ್ಸ್ ಹಾಗೂ ನೀರಿನ ಎತ್ತರ 4 ಮೀ. ನಿಂದ 6 ಮೀ. ಇದ್ದು ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 10 ಮೆಗಾ ವ್ಯಾಟ್‌ಗೆ ಹೆಚ್ಚಿಸುವಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

3. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 190 ಎನ್‌ಸಿಇ 2004, ಬೆಂಗಳೂರು, ದಿನಾಂಕ: 14ನೇ ಜೂನ್ 2004**

4. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಮೆಸರ್ಸ್ ಎಸ್.ಆರ್.ಎಸ್. ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಗುಲ್ಬರ್ಗಾ ಜಿಲ್ಲೆಯ ಶಹಪುರ ತಾಲ್ಲೂಕಿನ ಕದ್ರಪುರ ಗ್ರಾಮದ ಬಳಿ ಕೃಷ್ಣಾ ನದಿಗೆ ಅಡ್ಡಲಾಗಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಮಾಡಲಾದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 10 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಹಂಚಿಕೆ ಆದೇಶದ ನಿಬಂಧನೆಗಳಿಗೊಳಪಟ್ಟು ಅನುಮತಿ ನೀಡಲಾಗಿದೆ.

ರೇಖಾಂಶ : 77 08’ 50” ಪೂರ್ವ
ಅಕ್ಷಾಂಶ : 16 28’ 38” ಉತ್ತರ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 649 **ಕೆ.ಎಲ್. ಜಯರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ,ಇಂಧನ ಇಲಾಖೆ.

## INFRASTRUCTURE DEVELOPMENT SECRETARIAT

**Sub:** Gadag-Sholapur Gauge Conversion Project - Release of funds.

**Read:** 1. G.O. No. IDD 1 NSW 2003, dated 3.3.2003.
2. G.O. No. IDD 1 NSW 2003, dated 29.3.2003.
3. G.O. No. IDD 40 NSW 2003, dated 16.9.2003.
4. G.O. No. IDD 95 NSW 2003, dated 22.1.2004.

**Preamble:**

1. In the Government Orders read at (1) and (2) above, the Government of Karnataka (GoK) had released Rs. 2 crores and Rs. 8 crores respectively as GoK's share of 50% of the anticipated expenditure on the Gadag-Sholapur Guage Conversion Project in 2002-03.

2. In the Government Orders read at (3) and (4) above, the GoK had released Rs. 1 crore and Rs. 2 crores as GoK's share of 50% of the expenditure on the Project in 2003-04.

3. Chief Engineer, (Con.) has reported that up to 31-3-2004, South Western Railways (SWR) have spent Rs. 47.21 crores, whereas GoK had deposited only Rs. 13 crores, thereby leaving a balance of about Rs. 10.60 crores to be paid to them. After considering this, GoK has decided to release Rs. 3 crores (Rupees three crores only). Hence the following order.

**Government Order No. IDD 42 NSW 2004, Bangalore, dated 16th June 2004**

1. In the circumstances explained in the preamble, Government is pleased to release Rs. 3 crores (Rupees three crores only) towards the State Government's Share of the 50 percent of Sholapur-Gadag gauge Conversion Project up to the end of 31st March 2004.

2. This expenditure shall be met out of the Head of Account "5465-01-190-3-03-211 Sholapur-Gadag gauge conversion project-investments (Plan)".

3. The Managing Director, iDeCK is authorised to draw the amount through a payee's receipt duly countersigned by the Under Secretary to Government, Infrastructure Development Department and iDeCK shall in turn deposit the same with the Financial Advisor and Chief Accounts Officer, (Construction), South Western Railway, Bangalore.

4. The Chief Engineer, (Con.) SWR, shall arrange to furnish monthly expenditure statement to the Infrastructure Development Department by the 5th of the succeeding month.

5. This order issues with the concurrence of Finance Department vide its U.O. Note No. FD 740/Exp.1/2004, dated 1.6.2004.

By Order and in the Name of the Governor of Karnataka
**T.B. Renukaprasad**
Under Secretary to Government
Infrastructure Development Department.

PR-650

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಸಿಆಸುಇ 135 ಸಅಸೇ 2004, ಬೆಂಗಳೂರು, ದಿನಾಂಕ: 2ನೇ ಜೂನ್ 2004**

ಅಧಿಸೂಚನೆ ಸಂಖ್ಯೆ: ಸಿಆಸುಇ 135 ಸಅಸೇ 2004, ದಿನಾಂಕ: 28.5.2004ರ ಕ್ರಮ ಸಂಖ್ಯೆ 19 ರಲ್ಲಿ 'ಒಪ್ಪಂದದ ಆಧಾರದ ಮೇಲೆ' ಎಂಬುದಕ್ಕೆ ಬದಲಾಗಿ 'ನಿಯೋಜನೆ ಮೇಲೆ' ಎಂದು ಹಾಗೂ 'ಸಚಿವರ ಅಧಿಕಾರ ಮುಗಿದ ತಕ್ಷಣ ಜಾರಿಗೆ ಬರುವಂತೆ ಅಧಿಕಾರಿಯವರ ಒಪ್ಪಂದದ ಅವಧಿಯನ್ನು ಮುಕ್ತಾಯಗೊಳಿಸಲಾಗಿದೆ' ಎಂಬುದಕ್ಕೆ ಬದಲಾಗಿ 'ಸಮಾಜ ಕಲ್ಯಾಣ ಇಲಾಖೆ' ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 660

**ವಿಷಯ:** ಉಪ ಮುಖ್ಯಮಂತ್ರಿಯವರ ಕಾರ್ಯಾಲಯದಲ್ಲಿ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಉಪಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಉಮುಮಂ:69:2004, ದಿನಾಂಕ: 8.6.2004.

**ಪ್ರಸ್ತಾವನೆ:**

ಉಪಮುಖ್ಯಮಂತ್ರಿಯವರ ಕಾರ್ಯಾಲಯದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಉಪ ನಿರ್ದೇಶಕರನ್ನು ವಿಶೇಷ ಕರ್ತವ್ಯಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ದಿನಾಂಕ: 8.6.2004 ರ ಟಿಪ್ಪಣಿಯಲ್ಲಿ ಕೋರಲಾಗಿರುತ್ತದೆ. ಈ ವಿಷಯವನ್ನು ಪರಿಶೀಲಿಸಿ ಪರಿಗಣಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 162 ಸಅಸೇ 2004, ಬೆಂಗಳೂರು, ದಿನಾಂಕ: 11ನೇ ಜೂನ್ 2004**

ಉಪ ಮುಖ್ಯಮಂತ್ರಿಯವರ ಕಾರ್ಯಾಲಯದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಒಂದು ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಗ್ರೂಪ್-ಎ ವೃಂದದಲ್ಲಿ ಸೃಜಿಸಲು ಮಂಜೂರಾತಿ ನೀಡಲಾಗಿದೆ. ಈ ಹುದ್ದೆಯನ್ನು ಸೂಕ್ತ ಅಭ್ಯರ್ಥಿಯಿಂದ ನಿಯೋಜನೆ ಮೂಲಕ ನೇಮಿಸಿಕೊಂಡು ಭರ್ತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 664

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಸಿಆಸುಇ 42 ಶಿವಾನೀ 2003, ಬೆಂಗಳೂರು, ದಿನಾಂಕ: 19ನೇ ಮೇ 2004**

**ವಿಷಯ:** ಸಚಿವರ : ರಾಜ್ಯ ಸಚಿವರ, ಅತಿಥೇಯ ಸಂಸ್ಥೆಯ ಮತ್ತು ಸಚಿವಾಲಯದ ಕಾರ್ಯದರ್ಶಿಗಳ ಮತ್ತು ಇತರೆ ಅಧಿಕಾರಿಯವರ ಬಳಕೆಗೆ ಒದಗಿಸಿರುವ ವಾಹನಗಳನ್ನು ಖಾಸಗಿ ಕಾರ್ಯಾಗಾರದಿಂದ ದುರಸ್ತಿ ಮಾಡಿಸುವ ಬಗ್ಗೆ.

**ಉಲ್ಲೇಖ:**
1) ಸುತ್ತೋಲೆ ಸಂಖ್ಯೆ: ಸಿಆಸುಇ 77 ಶಿವಾನೀ 92, ದಿನಾಂಕ: 6.4.1995.
2) ಸುತ್ತೋಲೆ ಸಂಖ್ಯೆ: ಸಿಆಸುಇ 195 ಶಿವಾನೀ 96, ದಿನಾಂಕ: 26.9.1996.
3) ಅಡೆಂಡಮ್ ಸಂಖ್ಯೆ: ಸಿಆಸುಇ 53 ಶಿವಾನೀ 96, ದಿನಾಂಕ: 7.11.1996.
4) ಸೇರ್ಪಡೆ ಸಂಖ್ಯೆ: ಸಿಆಸುಇ 66 ಶಿವಾನೀ 97, ದಿನಾಂಕ: 12.6.1997.
5) ಸುತ್ತೋಲೆ ಸಂಖ್ಯೆ: ಸಿಆಸುಇ 98 ಶಿವಾನೀ 99, ದಿನಾಂಕ: 22.9.1999.
6) ಸೇರ್ಪಡೆ ಸಂಖ್ಯೆ: ಸಿಆಸುಇ 206 ಶಿವಾನೀ 99, ದಿನಾಂಕ: 8.3.2000.
7) ಸೇರ್ಪಡೆ ಸಂಖ್ಯೆ: ಸಿಆಸುಇ 24 ಶಿವಾನೀ 2000, ದಿನಾಂಕ: 6.2.2001.
8) ಸೇರ್ಪಡೆ ಸಂಖ್ಯೆ: ಸಿಆಸುಇ 266 ಶಿವಾನೀ 2001, ದಿನಾಂಕ: 25.2.2002.
9) ಸೇರ್ಪಡೆ ಸಂಖ್ಯೆ: ಸಿಆಸುಇ 119 ಶಿವಾನೀ 2002, ದಿನಾಂಕ: 23.7.2002.
10) ಸುತ್ತೋಲೆ ಸಂಖ್ಯೆ: ಸಿಆಸುಇ 39 ಶಿವಾನೀ 2003, ದಿನಾಂಕ: 12.9.2003.
11) ಸಮ ಸಂಖ್ಯೆಯ ಸುತ್ತೋಲೆ, ದಿನಾಂಕ: 13.5.2004.

ಸಚಿವರ : ರಾಜ್ಯ ಸಚಿವರ ಮತ್ತು ಸಚಿವಾಲಯದ ಇಲಾಖೆಗಳ ಹಾಗೂ ಅತಿಥೇಯ ಸಂಸ್ಥೆಯ ವಾಹನಗಳನ್ನು ಖಾಸಗಿ ಗ್ಯಾರೇಜುಗಳಿಂದ ಕೆಲವು ಷರತ್ತುಗಳೊಂದಿಗೆ ದುರಸ್ತಿ ಮಾಡಿಸಿಕೊಳ್ಳಲು ಉಲ್ಲೇಖ (1) ರಿಂದ (9) ರಲ್ಲಿನ ಸುತ್ತೋಲೆ : ಸೇರ್ಪಡೆಗಳಲ್ಲಿ ಸೂಚಿಸಿರುವ ಖಾಸಗಿ ಗ್ಯಾರೇಜುಗಳಿಗೆ ಅನುಮತಿ ನೀಡಲಾಗಿದೆ. ಕ್ರಮ ಸಂಖ್ಯೆ (10) ರ ಸುತ್ತೋಲೆಯಲ್ಲಿ ಮೆ: ಗೋಲ್ಡನ್ ವೀಲ್ ಗ್ಯಾರೇಜನ್ನು ಅಧಿಕೃತ ಗ್ಯಾರೇಜುಗಳ ಪಟ್ಟಿಯಿಂದ ಕೈಬಿಡಲಾಗಿದೆ. ಕ್ರಮ ಸಂಖ್ಯೆ 11 ರ ಸುತ್ತೋಲೆಯಲ್ಲಿ 10 ಗ್ಯಾರೇಜುಗಳನ್ನು ಅಧಿಕೃತ ಗ್ಯಾರೇಜುಗಳ ಪಟ್ಟಿಯಿಂದ ಕೈಬಿಡಲಾಗಿದೆ.

ಮೇಲಿನ ಕಾರಣಗಳಿಂದ ಉಲ್ಲೇಖಿಸಿರುವ (1) ರಿಂದ (9) ರವರೆಗಿನ ಸುತ್ತೋಲೆ : ಸೇರ್ಪಡೆಗಳನ್ನು ರದ್ದುಗೊಳಿಸಿ ಈ ಕೆಳಗೆ ಸೂಚಿಸಿರುವ ಗ್ಯಾರೇಜುಗಳನ್ನು ಮಾತ್ರ ಸಚಿವರ : ರಾಜ್ಯ ಸಚಿವರ ಮತ್ತು ಸಚಿವಾಲಯದ ಇಲಾಖೆಗಳ ಹಾಗೂ ಅತಿಥೇಯ ಸಂಸ್ಥೆಯ ವಾಹನಗಳನ್ನು ದುರಸ್ತಿ ಪಡಿಸಲು ಅಧಿಕೃತ ಗ್ಯಾರೇಜುಗಳೆಂದು ಗುರುತಿಸಿ ಆದೇಶಿಸಲಾಗಿದೆ:-

(1) ಮೆ: ಆಟೋಮೊಬೈಲ್ಸ್ ಸರ್ವೀಸ್ ಸೆಂಟರ್, ನಂ. 12, ವಿಕ್ಟೋರಿಯ ರಸ್ತೆ, ಬೆಂಗಳೂರು - 7.
(2) ಮೆ: ಹಿಂದೂಸ್ಥಾನ್ ಗ್ಯಾರೇಜ್, ನಂ. 1, ಆನೇಪಾಳ್ಯ ಮುಖ್ಯ ರಸ್ತೆ, ಮುನಿಯಪ್ಪ ಗಾರ್ಡನ್, ಗಜೇಂದ್ರ ನಗರ (ಮೈಕೋ ಫ್ಯಾಕ್ಟರಿ ಹತ್ತಿರ), ಬೆಂಗಳೂರು - 30.
(3) ಮೆ: ಮಾರುತಿ ಆಟೋ ವರ್ಕ್ಸ್, ಅರಮನೆ ಆವರಣ, ಜಯಮಹಲ್ ರಸ್ತೆ, ಮೇಖ್ರಿ ವೃತ್ತದ ಹತ್ತಿರ, ಬೆಂಗಳೂರು-6.
(4) ಮೆ: ಸಿಜೋ ಆಟೋ ಮೆಕ್, ನಂ. 47, 5ನೇ ಬ್ಲಾಕ್, ಇಂಡಸ್ಟ್ರಿಯಲ್ ಲೇಔಟ್, ಕೋರಮಂಗಲ, ಬೆಂಗಳೂರು.
(5) ಮೆ: ರಾಮಯ್ಯ ಆಟೋ ವರ್ಕ್ಸ್, 15ನೇ ಮೈನ್, 100 ಅಡಿ ರಸ್ತೆ, ಹೆಚ್.ಎ.ಎಲ್. 2ನೇ ಹಂತ, ಇಂದಿರಾನಗರ, ಬೆಂಗಳೂರು-38.
(6) ಮೆ: ಕಾರ್ತಿಕ್ ಆಟೋಮೊಬೈಲ್, ನಂ. 324:21, ತಿಮ್ಮಯ್ಯ ರಸ್ತೆ, ಮಿಲ್ಲರ್ ಟ್ಯಾಂಕ್, ಕ್ವೀನ್ಸ್ ಅಡ್ಡ ರಸ್ತೆ, ಬೆಂಗಳೂರು-52.
(7) ಮೆ: ಅರವಿಂದ್ ಮೋಟಾರ್ಸ್, ಟಿ.ವಿ.ಎಸ್. ಕ್ರಾಸ್, ಪೀಣ್ಯ 2ನೇ ಘಟ್ಟ, ಬೆಂಗಳೂರು.
(8) ಮೆ: ಪ್ರೇರಣಾ ಮೋಟಾರ್, ಆಡುಗೋಡಿ ರಸ್ತೆ, ಬೆಂಗಳೂರು.
(9) ಮೆ: ಕಾನ್‌ಕಾರ್ಡ್ ಮೋಟಾರ್ಸ್, ಹೊಸೂರು ರಸ್ತೆ, ಕ್ರೈಸ್ಟ್ ಕಾಲೇಜ್ ಹತ್ತಿರ, ಬೆಂಗಳೂರು.
(10) ಮೆ: ವಿಘ್ನೇಶ್ವರ ಆಟೋ ಮೆಕ್, ಸುಬ್ಬಣ್ಣ ಗಾರ್ಡನ್, ಆಡುಗೋಡಿ, ಬೆಂಗಳೂರು-30.

ಆದುದರಿಂದ, ಸಚಿವರ:ರಾಜ್ಯ ಸಚಿವರ ಮತ್ತು ಸಚಿವಾಲಯದ ಇಲಾಖೆಗಳ ಹಾಗೂ ಅತಿಥೇಯ ಸಂಸ್ಥೆಯ ವಾಹನಗಳನ್ನು ಈ ಅನುಮೋದಿತ ಖಾಸಗೀ ಗ್ಯಾರೇಜುಗಳಲ್ಲಿ ಮಾತ್ರ ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟು ದುರಸ್ಥಿ ಮಾಡಿಸಿಕೊಳ್ಳಬೇಕೆಂದು ಸೂಚಿಸಲಾಗಿದೆ:-

(1) ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ದುರಸ್ಥಿಗೆ ಮುನ್ನ ಹಾಗೂ ದುರಸ್ಥಿ ನಂತರ ದೃಢೀಕರಣ ಪತ್ರ ಪಡೆಯತಕ್ಕದ್ದು;
(2) ಅನುಮೋದಿತ ಗ್ಯಾರೇಜುಗಳಲ್ಲಿ ಕನಿಷ್ಠ ಮೂರು ಸಂಸ್ಥೆಗಳಿಂದ ದರ ಪಟ್ಟಿಯನ್ನು ಪಡೆದುಕೊಳ್ಳತಕ್ಕದ್ದು;
(3) ದುರಸ್ಥಿ ಬಗ್ಗೆ ಕನಿಷ್ಠ ಖಾತರಿ ಅವಧಿಯನ್ನು ಸಂಬಂಧಪಟ್ಟ ಸಂಸ್ಥೆಯಿಂದ ಪಡೆದುಕೊಳ್ಳಬೇಕಲ್ಲದೆ, ಈ ಸಂಬಂಧದಲ್ಲಿ ಲೋಪದೋಷಗಳು ಕಂಡು ಬಂದಲ್ಲಿ ಸಂಬಂಧಪಟ್ಟ ಗ್ಯಾರೇಜುಗಳಿಂದ ಅವುಗಳನ್ನು ಖಚಿತವಾಗಿ ಸರಿಪಡಿಸಿಕೊಳ್ಳಬೇಕು;
(4) ವಾಹನಗಳು ದುರಸ್ತಿಯಾದ ನಂತರ ಹಿಂದಿರುಗಿಸಲ್ಪಡುವ ಹಳೆಯ ಬಿಡಿ ಭಾಗಗಳನ್ನು ಆಯಾ ಇಲಾಖೆಯವರೇ ನಿಯಮಾವಳಿಗಳ ರೀತ್ಯಾ ವಿಲೇವಾರಿ ಮಾಡಿ, ಅದರಿಂದ ಬಂದ ಹಣವನ್ನು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡಬೇಕು;
(5) ವಾಹನಗಳ ದುರಸ್ಥಿಯಲ್ಲಿ ಅಧಿಕಾರಿಗಳು ನೀಡುವ ಕಾರ್ಯಾದೇಶಗಳನ್ನು ಪರಿಶೀಲಿಸಿ ಅದರಂತೆಯೇ ದುರಸ್ಥಿ ಕೆಲಸಗಳನ್ನು ಮಾಡತಕ್ಕದ್ದು;

(6) ಹೆಚ್ಚಿನ ದುರಸ್ತಿ ಬಗ್ಗೆ ಪ್ರತ್ಯೇಕವಾಗಿ ಕಾರ್ಯಾದೇಶಗಳನ್ನು ಪಡೆದು ಕ್ರಮ ಕೈಗೊಳ್ಳತಕ್ಕದ್ದು.

ಇತ್ತೀಚಿಗೆ ಸಚಿವಾಲಯದ ವಾಹನಗಳ ದುರಸ್ತಿ ವೆಚ್ಚದ ಬಗ್ಗೆ ಮಹಾಲೇಖಪಾಲರು ಆಡಿಟ್ ಮಾಡಿದ ಸಂದರ್ಭದಲ್ಲಿ ಎಷ್ಟೋ ಗ್ಯಾರೇಜುಗಳು ಅನುಮೋದಿಸಲ್ಪಟ್ಟಿದ್ದಾಗ್ಯೂ ಕೆಲವೇ ಅಂದರೆ ಒಂದು ಅಥವಾ ಎರಡು ಗ್ಯಾರೇಜುಗಳಿಗೆ ಮಾತ್ರ ವಾಹನಗಳನ್ನು ದುರಸ್ಥಿಗೆ ಕಳುಹಿಸಿರುವುದನ್ನು ತೀವ್ರವಾಗಿ ಆಕ್ಷೇಪಿಸಿರುತ್ತಾರೆ. ಮಹಾಲೇಖಪಾಲರು ಗಮನಿಸಿರುವ ನ್ಯೂನತೆಗಳನ್ನು ಸುತ್ತೋಲೆ ಸಂಖ್ಯೆ: ಸಿಆಸುಇ 286 ಶಿವಾನೀ 2002, ದಿನಾಂಕ: 11.2.2003 ರಲ್ಲಿ ಸೂಚಿಸಲಾಗಿತ್ತು. ಸಚಿವಾಲಯದ ಇಲಾಖೆಗಳು ವಾಹನಗಳನ್ನು ದುರಸ್ಥಿ ಮಾಡಿಸುವ ಸಂದರ್ಭದಲ್ಲಿ ಸುತ್ತೋಲೆ ಸಂಖ್ಯೆ: ಸಿಆಸುಇ 286 ಶಿವಾನೀ 2002, ದಿನಾಂಕ: 11.2.2003 ರಲ್ಲಿ ಸೂಚಿಸಿರುವ ನ್ಯೂನತೆಗಳನ್ನು ತಪ್ಪಿಸುವಂತೆ ಮತ್ತೊಮ್ಮೆ ಕೋರಲಾಗಿದೆ.

ಮೇಲೆ ತಿಳಿಸಿದ ಎಲ್ಲಾ ಷರತ್ತು ನಿಯಮಗಳನ್ನು ಸಂಬಂಧಪಟ್ಟವರು ಗಮನದಲ್ಲಿಟ್ಟುಕೊಂಡು ಈ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಈ ಮೂಲಕ ಸೂಚಿಸಲಾಗಿದೆ.

**ವಿ.ಜೆ.ಎ. ಆಶೀರ್ವಾದಂ**

ಪಿ.ಆರ್. 615 ಸರ್ಕಾರದ ಅಧೀನ ಕಾರ್ಯದರ್ಶಿ-2,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

## ಕಂದಾಯ ಸಚಿವಾಲಯ

**ವಿಷಯ:** 2004ರ ಮುಂಗಾರು ಹಂಗಾಮಿನಲ್ಲಿ ಸಿ.ಆರ್.ಎಫ್. ಯೋಜನೆಯಡಿ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ಪೂರೈಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 689 ಟಿಎನ್‌ಆರ್ 2003, ದಿನಾಂಕ: 25.3.2004.

2) ಟಿಪ್ಪಣಿ ಸಂಖ್ಯೆ: ಎಹೆಚ್‌ಡಿ 120 ಎಎಂಎಸ್ 04 ದಿನಾಂಕ: 5.4.2004 ಮತ್ತು ದಿ: 24.4.2004.

**ಪ್ರಸ್ತಾವನೆ:**

2004ರ ಮುಂಗಾರು ಹಂಗಾಮಿನಲ್ಲಿ ರಾಜ್ಯ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ 162 ತಾಲ್ಲೂಕುಗಳ ಸಣ್ಣ ಮತ್ತು ಅತೀ ಸಣ್ಣ ರೈತರುಗಳಿಗೆ ಶೇ. 50ರ ರಿಯಾಯ್ತಿ ದರದಲ್ಲಿ 13 ಬೆಳೆಗಳ ಬಿತ್ತನೆ ಬೀಜಗಳನ್ನು ಸರಬರಾಜು ಮಾಡಲು ಈ ಯೋಜನೆಗೆ ಒಟ್ಟಾರೆ ರೂ. 50.00 ಕೋಟಿಗಳ ಅಂದಾಜಿನ ಬೇಡಿಕೆಗಳಿಗೆ ಅಂದಾಜು ಮಾಡಲಾಗಿತ್ತು. ಮೊದಲನೆ ಕಂತಿನಲ್ಲಿ ರೂ. 2.50 ಕೋಟಿ ಅನುದಾನವನ್ನು ಮೇಲೆ ಓದಲಾದ (1)ರ ಆದೇಶದಲ್ಲಿ ಕೃಷಿ ಇಲಾಖೆಯ ಕೋರಿಕೆಯಂತೆ ಹಣ ಬಿಡುಗಡೆ ಮಾಡಲಾಗಿದೆ. ಎರಡನೇ ಕಂತಿನ ಹಣದಲ್ಲಿ ರೂ. 10.00 ಕೋಟಿ ಅನುದಾನವನ್ನು ಬಿಡುಗಡೆ ಮಾಡುವಂತೆ ಪ್ರಧಾನ ಕಾರ್ಯದರ್ಶಿಗಳು ಕೃಷಿ ಮತ್ತು ತೋಟಗಾರಿಕೆ ಇಲಾಖೆಯು ಕಂದಾಯ ಇಲಾಖೆಯನ್ನು ಮೇಲೆ ಓದಲಾದ (2)ರ ಟಿಪ್ಪಣಿಯಲ್ಲಿ ಕೋರಿದ್ದಾರೆ. ಈ ಕೋರಿಕೆಯ ಬಗ್ಗೆ ದಿನಾಂಕ: 7.4.2004 ಹಾಗೂ 29.4.2004 ರಂದು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಪ್ರಕೃತಿ ವಿಕೋಪ ಪರಿಹಾರ ನಿಧಿಯ ಆಡಳಿತ ಮತ್ತು ನಿರ್ವಹಣಾ ಸಮಿತಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದ ಹಿನ್ನೆಲೆಯಲ್ಲಿ ಅನುದಾನ ಬಿಡುಗಡೆ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 689 ಟಿಎನ್‌ಆರ್ 2003, ಬೆಂಗಳೂರು, ದಿನಾಂಕ: 24ನೇ ಮೇ 2004**
**(RD 22 R & I 2004)**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 2004 ರ ಮುಂಗಾರು ಹಂಗಾಮಿನಲ್ಲಿ ರಾಜ್ಯದಲ್ಲಿ ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ 162 ಮೇಲೆ (1) ರಲ್ಲಿ ಓದಲಾದ ದಿ: 25.3.2004ರ ಆದೇಶದ ತಾಲ್ಲೂಕುಗಳ ಸಣ್ಣ ಮತ್ತು ಅತೀ ಸಣ್ಣ ರೈತರುಗಳಿಗೆ ಶೇ. 50ರ ರಿಯಾಯಿತಿ ದರದಲ್ಲಿ ಅನುಬಂಧದಲ್ಲಿ ನಮೂದಿಸಿರುವ 13 ಬೆಳೆಗಳ ಬಿತ್ತನೆ ಬೀಜಗಳನ್ನು ವಿತರಿಸಲು ರೂ. 10.00 ಕೋಟಿ (ರೂ. ಹತ್ತು ಕೋಟಿ ರೂಪಾಯಿಗಳನ್ನು) ರಾಷ್ಟ್ರೀಯ ವಿಪತ್ತು ಸಾದಿಲ್ವಾರು ನಿಧಿಯಿಂದ (ಎನ್.ಸಿ.ಸಿ.ಎಫ್) ಕೃಷಿ ನಿರ್ದೇಶಕರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಮೇಲೆ ಬಿಡುಗಡೆ ಮಾಡಿದ ಅನುದಾನವನ್ನು ಬಳಸುವ ಸಂದರ್ಭದಲ್ಲಿ ಸಮ ಸಂಖ್ಯೆಯ ದಿ: 23.9.2003ರ ಆದೇಶದಲ್ಲಿ ನಿಗದಿಪಡಿಸಿರುವ ಷರತ್ತು ಹಾಗೂ ಮಾರ್ಗಸೂಚಿಗಳನ್ನು ಕಡ್ಡಾಯವಾಗಿ ಪಾಲಿಸುವುದು.

3. ಮೇಲೆ ಬಿಡುಗಡೆ ಮಾಡಿದ ಅನುದಾನವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರಿಂದ ಸ್ವೀಕೃತಿ ರಶೀತಿ ಮತ್ತು ಚಲನ್ ಮೂಲಕ ರಾಜ್ಯ ಹುಜೂರು ಖಜಾನೆಯಿಂದ ಡ್ರಾ ಮಾಡಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ವಿಧಾನಸೌಧ, ಬೆಂಗಳೂರು ಇಲ್ಲಿ ನಿರ್ವಹಿಸಲಾಗುತ್ತಿರುವ ಸಿಆರ್‌ಎಫ್ ಖಾತೆಗೆ ಜಮಾ ಮಾಡಿದ ನಂತರ ಕೃಷಿ ನಿರ್ದೇಶಕರಿಗೆ ಚೆಕ್ ಅಥವಾ ಡಿ.ಡಿ. ಮೂಲಕ ಕಳುಹಿಸಲಾಗುವುದು. ತದನಂತರ ಕೃಷಿ ನಿರ್ದೇಶಕರು ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಆ ಉದ್ದೇಶಕ್ಕಾಗಿ ಮಾತ್ರ ಸರ್ಕಾರದಿಂದ ಹೊರಡಿಸಿರುವ ಮಾರ್ಗಸೂಚಿ ಪ್ರಕಾರ ಬಳಸತಕ್ಕದ್ದು. ಈ ಅನುದಾನದಲ್ಲಿ ಸಾಧಿಸಿದ ಆರ್ಥಿಕ ಮತ್ತು ಭೌತಿಕ ಪ್ರಗತಿಯ ವರದಿಗಳನ್ನು ಹಾಗೂ ಬಳಕೆ ಪ್ರಮಾಣ ಪತ್ರಗಳನ್ನು ಕೃಷಿ ಆಯುಕ್ತರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2245-02-114-0-00 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/436/ವೆಚ್ಚ-7/04, ದಿನಾಂಕ: 12.5.2004 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2)

## ಅನುಬಂಧ

## ರಿಯಾಯಿತಿ ದರದಲ್ಲಿ ನೀಡಬೇಕಾಗಿರುವ ಬಿತ್ತನೆ ಬೀಜಗಳ ವಿವರ

| ಕ್ರ.ಸಂ. | ಬಿತ್ತನೆ ಬೀಜಗಳು | ಕ್ರ.ಸಂ. | ಬಿತ್ತನೆ ಬೀಜಗಳು |
|---|---|---|---|
| 1 | ಭತ್ತ | 8 | ಹೆಸರುಕಾಳು |
| 2 | ಜೋಳ | 9 | ಅಲಸಂದೆ |
| 3 | ರಾಗಿ | 10 | ಶೇಂಗಾ |
| 4 | ಮೆಕ್ಕೆಜೋಳ | 11 | ಸೂರ್ಯಕಾಂತಿ |
| 5 | ಸಜ್ಜೆ | 12 | ಸೋಯಾಬೀನ್ |
| 6 | ತೊಗರಿ | 13 | ಹತ್ತಿ |
| 7 | ಉದ್ದು | | |

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 651

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2)

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಶ್ರೀ ರಾಜೇಂದ್ರ ಪಾಟೀಲ್, ಮಾಜಿ ಸಿಪಿಸಿ 238, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ದಾವಣಗೆರೆ ಜಿಲ್ಲೆ ರವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಇವಿ/16/2000-01 ಓಬಿ ಸಂಖ್ಯೆ: 14/2001-02, ದಿನಾಂಕ: 2.7.2001.
2) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಜಿಲ್ಲೆ ರವರ ಆದೇಶ ಸಂಖ್ಯೆ: ಅಪೀಲು/30/2001-02, ಓಬಿ ಸಂಖ್ಯೆ: 12/2003-04, ದಿನಾಂಕ: 23.4.2003.
3) ಅರ್ಜಿದಾರರ ಮನವಿ ದಿನಾಂಕ: 25.7.2003.
4) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2)60/2003-04, ದಿನಾಂಕ: 8.11.2003.

**ಪ್ರಸ್ತಾವನೆ:**

ಶ್ರೀ ರಾಜೇಂದ್ರ ಪಾಟೀಲ್, ಮಾಜಿ ಸಿಪಿಸಿ 238, ದಾವಣಗೆರೆ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ರವರ ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ನೀವು ದಾವಣಗೆರೆಯ ಅಜಾದ್‌ನಗರ ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುತ್ತಿದ್ದಾಗ, ಈಗ್ಗೆ ಸುಮಾರು 3 ವರ್ಷದಿಂದ ಗಂಗಮ್ಮ ತಂದೆ ಮಹಾದೇವಪ್ಪ, ಚಲುವಾದಿ ಜನಾಂಗ, ವಾಸ ಮುದ್ದಬೋವಿ ಕಾಲೋನಿ, ದಾವಣಗೆರೆ ಎಂಬ ಅವಿವಾಹಿತ ಮಹಿಳೆಯನ್ನು ಮದುವೆಯಾಗುವುದಾಗಿ ನಂಬಿಸಿ ಆಕೆಯೊಂದಿಗೆ ಅಕ್ರಮ ಸಂಬಂಧ ಬೆಳೆಸಿ ಆಕೆಗೆ 3 ಬಾರಿ ಗರ್ಭಪಾತ ಮಾಡಿಸಿ ನಂತರ ಆಕೆಗೆ ನಂಬಿಕೆ ದ್ರೋಹ ಬಗೆದು ಬೇರೆ ಮದುವೆ ಮಾಡಿಕೊಂಡು ಇಲಾಖೆಗೆ ಕಳಂಕ ತರುವ ರೀತಿಯಲ್ಲಿ ವರ್ತಿಸಿದ್ದಾರೆ. ಅಲ್ಲದೆ ಇವರು ದಿನಾಂಕ: 7.10.2000 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತೆ ಪ್ರದರ್ಶಿಸಿದ್ದಲ್ಲದೆ ಅತೀವ ದುರ್ನಡತೆಯನ್ನು ಸಹಾ ಪ್ರದರ್ಶಿಸಿರುತ್ತಾರೆ."

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾದ್ದರಿಂದ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ, ಅಮಾನತ್ತಿನ ಅವಧಿಯನ್ನು ಜೀವನಾಧಾರ ಭತ್ಯೆಗೆ ಸಮಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ. ಮೇಲ್ಕಂಡ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಿದ್ದು, ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1. ಪೂರ್ವಭಾವಿ ವಿಚಾರಣೆಯ ಆಧಾರದ ಮೇಲೆ ತನ್ನ ವಿರುದ್ಧ ಇಲಾಖಾ ವಿಚಾರಣೆ ನಡೆಸಲಾಗಿದೆ. ಇದು ನಿಯಮಕ್ಕೆ ವಿರುದ್ಧ.
2. ತಾನು ಶ್ರೀಮತಿ ಗಂಗಮ್ಮನವರೊಂದಿಗೆ ವಿವಾಹದ ಪ್ರಸ್ತಾವನೆಯನ್ನು ಮಾಡಿದ್ದು ಅವರ ತಾಯಿತಂದೆ ಜಾತಿ ಬೇಧದಿಂದ ಒಪ್ಪಿಲ್ಲ. ಆದ್ದರಿಂದ ತಾನು ಬೇರೆ ಮದುವೆಯಾಗಿದ್ದೇನೆ.
3. ಅ.ಸಾ. 7 ರವರಾದ ಡಾ: ಮಧುಕರ್ ರವರು ತಮ್ಮ ಹೇಳಿಕೆಯಲ್ಲಿ ಅ.ಸಾ.1 ಶ್ರೀಮತಿ ಗಂಗಮ್ಮ ರವರಿಗೆ ಯಾವುದೇ ಗರ್ಭಪಾತ ಮಾಡಿಲ್ಲವೆಂದು ಸಾಕ್ಷಿ ನುಡಿದಿರುತ್ತಾನೆ. ತಾನು ಬೇರೆ ಮದುವೆಯಾದ ಮೇಲೆ ವಿನಾಕಾರಣ ಅರ್ಜಿ ಸಲ್ಲಿಸಿರುತ್ತಾರೆ.

4. ತಾನು 2 ದಿನಗಳ C.L. ಪಡೆದು ನಂತರ ಇನ್ನೂ 4 ದಿನಗಳಿಗೆ ವಿಸ್ತರಿಸಲು ಟೆಲಿಗ್ರಾಂ ಕಳುಹಿಸಿರುವುದರಿಂದ ತನ್ನದು ಅನಧಿಕೃತ ಗೈರುಹಾಜರಿ ಅಲ್ಲ.

ಅರ್ಜಿದಾರರ ವಾದಾಂಶಗಳನ್ನು ಪರಿಶೀಲಿಸಲಾಗಿ, ತಾನು ಶ್ರೀಮತಿ ಗಂಗಮ್ಮನವರೊಂದಿಗೆ ವಿವಾಹ ಪ್ರಸ್ತಾಪ ಮಾಡಿದ್ದು, ಅಂತರ್ಜಾತಿಯ ಕಾರಣದಿಂದ ಒಪ್ಪಿಲ್ಲ ಎಂದು ವಾದ ಮಂಡಿಸಿರುವುದು ಅವರು ಸದರಿಯವರನ್ನು ಪ್ರೀತಿಸಿರುವುದು ಸ್ಪಷ್ಟವಾಗಿದೆ. ಅ.ಸಾ.1 ರವರೇ ತನಗೆ ಗರ್ಭಪಾತವಾಗಿದೆ ಎಂದು ಸಾಕ್ಷ್ಯ ನೀಡಿರುವುದು ಅರ್ಜಿದಾರರು ಆಕೆಯನ್ನು ನಂಬಿಸಿ ಮೋಸ ಮಾಡಿದ್ದಾರೆ ಅನ್ನುವುದನ್ನು ಖಚಿತಪಡಿಸುತ್ತದೆ. ಎಲ್ಲಾ ಅ.ಸಾ.ಗಳೂ ಅರ್ಜಿದಾರರು ಆಕೆಯನ್ನು ಮದುವೆಯಾಗುವುದಾಗಿ ಹೇಳಿಕೊಂಡು ಮನೆಗೆ ಬರುತ್ತಿದ್ದುದಾಗಿ ಸಾಕ್ಷ್ಯ ನುಡಿದಿರುವುದು ಮೇಲ್ಕಂಡ ಅಂಶವನ್ನು ಇನ್ನೂ ಖಚಿತಗೊಳಿಸುತ್ತದೆ. ಅರ್ಜಿದಾರರ ವಾದಾಂಶಗಳಲ್ಲಿ ಅವರ ಮೇಲಿನ ಆಪಾದನೆಯನ್ನು ಅಲ್ಲಗಳೆಯುವಂತಹ ಅಂಶಗಳನ್ನು ಮಂಡಿಸಿಲ್ಲವಾದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 139 ಪೊಸಿಅ 2003, ಬೆಂಗಳೂರು, ದಿನಾಂಕ: 12ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜೇಂದ್ರ ಪಾಟೀಲ್, ಮಾಜಿ ಸಿಪಿಸಿ, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 652

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಶೈಲಪ್ಪ, 1040, ಚಿತ್ರದುರ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಜಿಲ್ಲೆ ರವರ ಆದೇಶ ಸಂಖ್ಯೆ: ಸಿಬ್ಬಂದಿ-2/ಡಿಇ/4/98- ಓಬಿ ಸಂಖ್ಯೆ: 142/99, ದಿನಾಂಕ: 27.11.99.
2) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಆದೇಶ ಸಂಖ್ಯೆ: ಅಪೀಲು (1) 40/99-2000 ದಿ: 21/5.7.2001.
3) ಅರ್ಜಿದಾರರ ಮನವಿ ದಿನಾಂಕ: 18.1.2003.
4) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು(2)105/2002-03, ದಿನಾಂಕ: 25.3.2004.

**ಪ್ರಸ್ತಾವನೆ:**

ಶ್ರೀ ಶೈಲಪ್ಪ, ಪಿಸಿ 1040, ಚಿತ್ರದುರ್ಗ ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರ ನಿಯಮ 6 ಮತ್ತು 8 ರಡಿ ಜಂಟೀ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"ಸಿಪಿಸಿ 1040 ಶ್ರೀ ಶೈಲಪ್ಪ ಹಾಗೂ 985 ಸಿ. ರಂಗಸ್ವಾಮಿ ವಿರುದ್ಧ ದಿನಾಂಕ: 7/8.1.98ರ ಬೆಳಗಿನ ಜಾವ ಸುಮಾರು 2.00 ಗಂಟೆ ಸಮಯದಲ್ಲಿ ಶ್ರೀ ಎಸ್. ಮಹದೇವಪ್ಪ, ಪಿಎಸ್‌ಐ, ಪಿ.ಆರ್. ಪುರ ಠಾಣೆಗೆ ಇವರು ಸರ್ಕಾರಿ ಜೀಪ್ ಸಂ. ಕೆಎ 16 ಜಿ 64 ನ್ನು ರಾತ್ರಿ ಗಸ್ತು ನಿರ್ವಹಿಸಿ ವಾಪಸ್ಸು ಠಾಣೆಗೆ ತಂದು ನಿಲ್ಲಿಸಿದ ನಂತರ ಠಾಣೆಯ ಮುಂದೆ ಹಾಯ್ದು ಹೋಗುವ ಖಾಸಗಿ ಲಾರಿಯನ್ನು ಚೆಕ್ ಮಾಡುವ ಸಲುವಾಗಿ ಬೆನ್ನತ್ತಿಕೊಂಡು ಹೋಗುವ ಪ್ರಯುಕ್ತ ಖಾಸಗಿ ಚಾಲಕರಾದ ಇಮ್ತಿಯಾಜ್‌ಗೆ ಪ್ರಚೋದಿಸಿದ್ದು ನಂತರ ಜೀಪನ್ನು ದಬ್ಬಿ ಸ್ಟಾರ್ಟ್ ಮಾಡಿಕೊಂಡು ಅತಿ ಜೋರಾಗಿ ಅಜಾಗರೂಕತೆಯಿಂದ ಓಡಿಸಿ ಚಿಕ್ಕಚೆಲ್ಲೂರು ಗ್ರಾಮದ ಹತ್ತಿರ ಪಾದಚಾರಿಗಳಿಗೆ ಡಿಕ್ಕಿ ಹೊಡೆದ ಪರಿಣಾಮವಾಗಿ 5 ಜನರ ಸಾವಿಗೆ ಹಾಗೂ 4 ಜನರಿಗೆ ತೀವ್ರ ಸ್ವರೂಪದ ಗಾಯವಾಗಲು ಜವಾಬ್ದಾರರಾಗಿ ನಿಮ್ಮಗಳ ಕರ್ತವ್ಯಚ್ಯುತಿ ಹಾಗೂ ಅಧಿಕಾರ ದುರುಪಯೋಗದ ಆಪಾದನೆಗೆ ಗುರಿಯಾಗಿರುತ್ತೀರಿ."

ಮೇಲ್ಕಂಡ ಆರೋಪದ ಬಗ್ಗೆ ನಡೆಸಿದ ಇಲಾಖಾ ವಿಚಾರಣೆಯಲ್ಲಿ ಆರೋಪ ನಿಸ್ಸಂದೇಹವಾಗಿ ಸಾಬೀತಾಗಿದ್ದರಿಂದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮವಾಗಿ 2 ವರ್ಷ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಪರಿಗಣಿಸಿದರೂ, ಅಂಶಿಕವಾಗಿ ಪುರಸ್ಕರಿಸಿ, ಸಂಚಿತಪರಿಣಾಮದ ಬದಲಿಗೆ ಸಂಚಿತಪರಿಣಾಮರಹಿತವಾಗಿ 2 ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧವೂ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1. ಪೂರ್ವಭಾವಿ ವಿಚಾರಣೆ ಆಧಾರದ ಮೇಲೆ ಶಿಕ್ಷೆ ವಿಧಿಸಲಾಗಿದೆ.
2. ತನ್ನನ್ನು ಪ್ರತಿರಕ್ಷಿಸಿಕೊಳ್ಳಲು ಅವಕಾಶ ನೀಡಿರುವುದಿಲ್ಲ.

3. ತಾನು ಸದರಿ ಜೀಪಿನಲ್ಲಿ ಹೋಗಿಲ್ಲ. ಖಾಸಗಿ ಚಾಲಕ ವಾಹನ ನಡೆಸಲು ತಾನು ಪ್ರಚೋದಿಸಿಲ್ಲ.
4. ತನ್ನ ವಿರುದ್ಧ ಕೇವಲ ಊಹೆ ಆಧಾರದ ಮೇಲೆ ಶಿಕ್ಷೆ ವಿಧಿಸಲಾಗಿದೆ.

ಪೂರ್ವಭಾವಿ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುವಂತೆ ಕಂಡುಬಂದಿದ್ದರಿಂದ ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಿ ಆರೋಪು ನಿಸ್ಸಂದೇಹವಾಗಿ ಸಾಬೀತಾದ್ದರಿಂದಲೇ ಶಿಕ್ಷೆ ವಿಧಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ತಮ್ಮನ್ನು ಪ್ರತಿರಕ್ಷಿಸಿಕೊಳ್ಳಲು ಸಾಕಷ್ಟು ಅವಕಾಶ ಕಲ್ಪಿಸಲಾಗಿದೆ. ಅ.ಸಾ. 2 ಸಾಕ್ಷ್ಯದಿಂದ ಅರ್ಜಿದಾರರೇ ಖಾಸಗಿ ವಾಹನ ಚಾಲಕರನ್ನು ಪ್ರಚೋದಿಸಿ, ಠಾಣೆಯ ಮುಂದೆ ಹಾಯ್ದುಹೋದ ಲಾರಿಯನ್ನು ಹಿಡಿಯಲು ತೆಗೆದುಕೊಂಡು ಹೋಗಿರುವುದು ಸ್ಪಷ್ಟವಾಗಿದೆ. ಇದರಿಂದಾಗಿ ಅರ್ಜಿದಾರರು ಮೇಲಾಧಿಕಾರಿಗಳ ಅನುಮತಿ ಇಲ್ಲದೆ ವಾಹನವನ್ನು ತೆಗೆದುಕೊಂಡು ಹೋಗಿದ್ದು ಅಪಘಾತಕ್ಕೆ ಕಾರಣವಾಗಿದ್ದಲ್ಲದೇ ಐವರ ಸಾವಿಗೆ ಕಾರಣರಾಗಿರುತ್ತಾರೆ. ಇವರು ಎಸಗಿರುವ ತಪ್ಪಿಗೆ ವಿಧಿಸಿರುವ ಶಿಕ್ಷೆ ಅತ್ಯಲ್ಪ. ಅದನ್ನೂ ಮೇಲ್ಮನವಿ ಪ್ರಾಧಿಕಾರಿ ಸಾಕಷ್ಟು ಅನುಕಂಪ ತೋರಿಸಿ ಶಿಕ್ಷೆ ಕಡಿಮೆ ಮಾಡಿರುತ್ತಾರೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 16 ಪೊಸಿಅ 2003, ಬೆಂಗಳೂರು, ದಿನಾಂಕ: 4ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶೈಲಪ್ಪ, ಪಿಸಿ 1040, ಚಿತ್ರದುರ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 653

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಲ್. ಗಂಗಾಧರನಾಯ್ಕ, ಸಿಪಿಸಿ 775, ಚಿತ್ರದುರ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಚಿತ್ರದುರ್ಗ ರವರ ಆದೇಶ ಸಂಖ್ಯೆ: ಪಿಆರ್/76/2000-01 ಓಬಿ ಸಂ. 208/2000-01, ದಿನಾಂಕ: 5.8.2000.
2) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ರವರ ಆದೇಶ ಸಂಖ್ಯೆ: ಅಪೀಲು-77/2001-02 ಓಬಿ ಸಂ. 54/2001, ದಿನಾಂಕ: 31.7.2001.
3) ಅರ್ಜಿದಾರರ ಮನವಿ ದಿನಾಂಕ: 5.8.2002.
4) ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2)57/2002-03, ದಿನಾಂಕ: 30.3.2004.

**ಪ್ರಸ್ತಾವನೆ:**

ಶ್ರೀ ಎಲ್. ಗಂಗಾಧರ್, ಸಿಪಿಸಿ 775, ಚಿತ್ರದುರ್ಗ ಜಿಲ್ಲೆ ರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

**ದೋಷಾರೋಪ:**

"ಸಿಪಿಸಿ 775, ಎಲ್. ಗಂಗಾಧರ್, ಇವರು ವರ್ಗಾವಣೆ ಹೊಂದಿ ಹಿರಿಯೂರು ಠಾಣೆಯಲ್ಲಿ ವರದಿ ಮಾಡಿಕೊಂಡು 3 ತಿಂಗಳ ಮೇಲಾದರೂ, ಚಿತ್ರದುರ್ಗ ನಗರ ಠಾಣೆಗೆ ವರ್ಗಾವಣೆ ಮೇಲೆ ತೆಗೆದುಕೊಳ್ಳಲು ಒತ್ತಡ ತರುವುದು, ಅನಧಿಕೃತವಾಗಿ ಕೇಂದ್ರ ಸ್ಥಾನ ಬಿಡುವುದು ಹಾಗೂ ವಸತಿಗೃಹ ಖಾಲಿ ಮಾಡದೇ ಕರ್ತವ್ಯದಲ್ಲಿ ಘೋರ ದುರ್ನಡತೆ ಹಾಗೂ ನಿರ್ಲಕ್ಷ್ಯತೆ ಪ್ರದರ್ಶಿಸಿದ ಬಗ್ಗೆ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ ಒಂದು ವರ್ಷ ಕಾಲ ಮುಂದೂಡಿರುತ್ತಾರೆ. ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ತಾನು ಯಾವುದೇ ರೀತಿಯ ಒತ್ತಡ ತಂದಿಲ್ಲ. ತಾನು ಅಸ್ತಮಾ ರೋಗಿಯಾಗಿದ್ದು, ಚಿತ್ರದುರ್ಗದಲ್ಲಿಯೇ ಇರಿಸಲು ಎಸ್.ಪಿ. ರವರಿಗೆ ವಿನಂತಿಸಿಕೊಂಡಿದ್ದೇನೆ. ಆದರೂ ಆದೇಶವನ್ನು ಪಾಲಿಸಿ ಹಿರಿಯೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ಹಿರಿಯೂರಿನಲ್ಲಿ ಮನೆ ಸಿಕ್ಕಿಲ್ಲವಾದ್ದರಿಂದ ಹಾಗೂ ಮಕ್ಕಳ ವಿದ್ಯಾಭ್ಯಾಸದ ದೆಸೆಯಿಂದ ವಸತಿಗೃಹ ಖಾಲಿ ಮಾಡಿಲ್ಲ ಎಂದು ವಾದ ಮಂಡಿಸಿರುತ್ತಾರೆ. ಆದರೆ 'ದುರ್ಗದ ಹುಲಿ' ಎಂಬ ಸ್ಥಳೀಯ ಪತ್ರಿಕೆಯಲ್ಲಿ ಬಂದಿರುವ ವರದಿಯಿಂದ ಅರ್ಜಿದಾರರು ಸದರಿ ಪತ್ರಿಕೆಗೆ ಮಾಹಿತಿ ನೀಡಿರುವುದು ಸ್ಪಷ್ಟ. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಇಂತಹ ನಡತೆ ಸರಿಯಲ್ಲ. ಅರ್ಜಿದಾರರು ಎಸಗಿರುವ ದುರ್ನಡತೆಗೆ ವಿಧಿಸಿರುವ ಶಿಕ್ಷೆ ಅತ್ಯಲ್ಪ. ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 215 ಪೊಸಿಅ 2002, ಬೆಂಗಳೂರು, ದಿನಾಂಕ: 5ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಲ್. ಗಂಗಾಧರ್, ಸಿಪಿಸಿ 775, ಚಿತ್ರದುರ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 654

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಮೈನೂದ್ದೀನ್, ಎಪಿಸಿ 215, ಡಿಎಆರ್, ಬೀದರ್ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬೀದರ್ ಜಿಲ್ಲೆ ರವರ ಆದೇಶ ಸಂಖ್ಯೆ: ಡಿಇ/2/29/2000-01, ದಿನಾಂಕ: 23.3.2001.
2) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗ ರವರ ಆದೇಶ ಸಂಖ್ಯೆ: ಅಪೀಲು/75/ಈವ/2001, ದಿನಾಂಕ: 4.10.2001.
3) ಅರ್ಜಿದಾರರ ಮನವಿ ದಿನಾಂಕ: 21.8.2003.
4) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಅಪೀಲು (2)81/2002-03, ದಿನಾಂಕ: 25.3.2004.

**ಪ್ರಸ್ತಾವನೆ:**

ಶ್ರೀ ಮೈನುದ್ದೀನ್, ಎಪಿಸಿ, ಡಿಎಆರ್, ಗುಲ್ಬರ್ಗ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) "ದಿನಾಂಕ: 11.1.2000 ರಂದು ಬೆಳಿಗ್ಗೆ ಶ್ರೀ ವಿರೂಪಾಕ್ಷ, ಶೀಘ್ರಲಿಪಿಗಾರರು, ಜಿಲ್ಲಾ ಪೊಲೀಸ್ ಕಮೀಷನರ್, ಬೀದರ್ ರವರನ್ನು ಅವಾಚ್ಯ ಶಬ್ದಗಳಿಂದ ಬೈದ" ಆರೋಪದ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

ಮೇಲ್ಕಂಡ ಆರೋಪದ ಬಗ್ಗೆ ಅರ್ಜಿದಾರರ ಸಮಜಾಯಿಷಿಯನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 2 ವರ್ಷಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲದಿದ್ದರೂ ಅನುಕಂಪ ತೋರಿಸಿ ಮೇಲ್ಮನವಿ ಪ್ರಾಧಿಕಾರಿ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 6 ತಿಂಗಳ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧವೂ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿ ಸಲ್ಲಿಸಿರುತ್ತಾರೆ. ಎಸ್.ಪಿ. ರವರು ಪೂರ್ವಾಗ್ರಹ ಪೀಡಿತರಾಗಿ ಶಿಕ್ಷೆ ವಿಧಿಸಿರುತ್ತಾರೆ. ಅಮಾನತ್ತಿನ ಅವಧಿಯನ್ನು ತನ್ನ ಹಕ್ಕಿನಲ್ಲಿರುವ ರಜೆ ಎಂದು ಪರಿಗಣಿಸಲು ಮಾತ್ರ ಮನವಿ ಮಾಡಿರುತ್ತಾರೆ. ಅರ್ಜಿದಾರರು ಬೈದಿರುವ ಬಗ್ಗೆ ಸಾಕ್ಷ್ಯಾಧಾರಗಳಿಂದ ಸಾಬೀತಾಗಿದ್ದರೂ ಶಿಕ್ಷೆಯನ್ನು ಮೇಲ್ಮನವಿ ಪ್ರಾಧಿಕಾರಿ ಅನುಕಂಪ ತೋರಿಸಿರುತ್ತಾರೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 92 ಪೊಸಿಅ 2004, ಬೆಂಗಳೂರು, ದಿನಾಂಕ: 11ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮೈನೂದ್ದೀನ್, ಎಪಿಸಿ, ಡಿಎಆರ್, ಬೀದರ್ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 655

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ವಿಶ್ವನಾಥ್, ಸಿಪಿಐ, ಬ್ರೂಸ್‌ಪೇಟೆ ವೃತ್ತ ಹಾಲಿ ಪಿ.ಐ., ಐ.ಜಿ.ಪಿ. ಪೂರ್ವ ವಲಯ ಕಛೇರಿ, ದಾವಣಗೆರೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಕುರಿತು.

**ಓದಲಾಗಿದೆ:**
1) ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಬಳ್ಳಾರಿ ಜಿಲ್ಲೆ ರವರ ಆದೇಶ ಸಂಖ್ಯೆ: 173/ಪಿಆರ್/2001 ಜಿ.ಅ.ಸಂ. 498/2001-02, ದಿನಾಂಕ: 13.2.2002.
2) ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಹಿಂಬರಹ ದಿನಾಂಕ: 5.4.2001.
3) ಅರ್ಜಿದಾರರ ಮನವಿ ದಿನಾಂಕ: 31.7.2003.
4) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಸಿಬಿ 8/30/2003-04, ದಿನಾಂಕ: 17.11.2003.

**ಪ್ರಸ್ತಾವನೆ:**

ಶ್ರೀ ಎಂ. ವಿಶ್ವನಾಥ್, ಸಿಪಿಐ, ಬ್ರೂಸ್‌ಪೇಟೆ ವೃತ್ತ, ದಾವಣಗೆರೆ ಜಿಲ್ಲೆ ರವರ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ವಿರುದ್ಧ "ಎರಡು ನ್ಯಾಯಾಲಯ ಸಮನ್‌ಗಳನ್ನು ಜಾರಿ ಮಾಡದ" ಆಪಾದನೆಯ ಬಗ್ಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 7 ರಡಿ ಶಿಸ್ತು ಕ್ರಮ ಜರುಗಿಸಲಾಗಿದೆ.

ಅರ್ಜಿದಾರರು ಸಮಜಾಯಿಷಿ ನೀಡದೇ ಇದ್ದುದರಿಂದ ಏಕಪಕ್ಷೀಯವಾಗಿ ಕ್ರಮ ಜರುಗಿಸಿ, ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತಪರಿಣಾಮರಹಿತವಾಗಿ 6 ತಿಂಗಳ ಕಾಲ ಮುಂದೂಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು "ಕಾಲವಿಳಂಬಿತ ಅರ್ಜಿ" ಎಂದು ಪರಿಗಣಿಸಿ ಮೇಲೆ (2) ರಲ್ಲಿ ಓದಲಾದ ಹಿಂಬರಹವನ್ನು ನೀಡಿರುತ್ತಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ತಮ್ಮ ಕಛೇರಿಯಲ್ಲಿ ಸಮನ್ಸ್ ಜಾರಿ ಮಾಡಲು ಸಿಬ್ಬಂದಿ ಇಲ್ಲದ್ದರಿಂದ ಪಿಎಸ್‌ಐ (ಕಾಸು) ರವರಿಗೆ ಜಾರಿ ಮಾಡಲು ನಿಯೋಜಿಸಿದ್ದೇನೆ. ತಮ್ಮ ಕರ್ತವ್ಯಲೋಪವಿಲ್ಲ. ಕೆಳಗಿನ ಸಿಬ್ಬಂದಿ ಗಣೇಶ ಹಬ್ಬದ ಪ್ರಯುಕ್ತ ಬಂದೋಬಸ್ತ್ ಹಾಗೂ ಒಂದು ಗ್ರಾಮದಲ್ಲಿ ದಲಿತ ಮಹಿಳೆಯ ಮೇಲೆ ಅತ್ಯಾಚಾರ ಪ್ರಕರಣದಿಂದಾಗಿ ಸಮನ್ಸ್ ಜಾರಿ ಮಾಡಿಲ್ಲ ಎಂದು ವಾದಿಸಿರುತ್ತಾರೆ.

ಅರ್ಜಿದಾರರು ನ್ಯಾಯಾಲಯ ಸಮನ್ಸ್‌ಗಳ ಪ್ರಾಮುಖ್ಯತೆಯನ್ನು ಅರಿತಿದ್ದರೂ ಸಹ ಕಛೇರಿಯಲ್ಲಿ ಸಿಬ್ಬಂದಿ ಇಲ್ಲ. ಬೇರೆಲ್ಲೋ ನಿಯೋಜಿಸಲಾಗಿದೆ ಎಂದು ಸಬೂಬು ಹೇಳಿರುವುದು ಅವರ ಬೇಜವಾಬ್ದಾರಿ ಮತ್ತು ಕರ್ತವ್ಯಲೋಪವನ್ನು ಎತ್ತಿತೋರಿಸುತ್ತದೆ. ಸಕಾಲದಲ್ಲಿ ಸಮಜಾಯಿಷಿ ನೀಡದೇ ಇರುವುದು ಹಾಗೂ ಕಾಲವಿಳಂಬಿತ ಅರ್ಜಿಯನ್ನು ಸಲ್ಲಿಸುವುದು ಅವರ ಬೇಜವಾಬ್ದಾರಿಯನ್ನು ಸ್ಪಷ್ಟಪಡಿಸುತ್ತದೆ. ಅವರ ವಾದಗಳಲ್ಲಿ ನಂಬಲರ್ಹವಾದ ಅಂಶಗಳಿಲ್ಲದೇ ಇರುವುದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 143 ಪೊಸಿಅ 2003, ಬೆಂಗಳೂರು, ದಿನಾಂಕ: 10ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ವಿಶ್ವನಾಥ್, ಸಿಪಿಐ, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 656

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸೇವೆಗಳು)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಎಲ್.ಆರ್. ರುದ್ರಯ್ಯ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತಿ) ಇವರನ್ನು ನಗರ ಯೋಜನಾ ಇಲಾಖೆಗೆ ಸಮಾಲೋಚಕರನ್ನಾಗಿ ಮುಂದುವರೆಸುವ ಬಗ್ಗೆ ಹಾಗೂ ಇವರ ಒಪ್ಪಂದದ ನೇಮಕಾತಿ ನಿಬಂಧನೆ ಮತ್ತು ಷರತ್ತುಗಳ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂ. ಯುಡಿಡಿ 130 ನಯೋಸೇ 99, ದಿ: 7.11.02.
2) ತಿದ್ದುಪಡಿ ಆದೇಶ ಸಂ. ಯುಡಿಡಿ 130 ನಯೋಸೇ 99 ದಿ: 21.12.02.
3) ಸರ್ಕಾರದ ಆದೇಶ ಸಂ. ನಅಇ 130 ನಯೋಸೇ 99 ದಿನಾಂಕ: 28.8.2003.
4) ಸಂ. ನಯೋ.ಲೆವಿ (1) ನಗರ ನಕ್ಷೆ 03 ದಿನಾಂಕ: 8.1.2004, ನಿರ್ದೇಶಕರು, ನಗರ ಯೋಜನಾ ಇಲಾಖೆ.

**ಪ್ರಸ್ತಾವನೆ:**

ಶ್ರೀ ಎಲ್.ಆರ್. ರುದ್ರಯ್ಯ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ಇವರನ್ನು ಮೇಲೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಿನಾಂಕ: 7.11.2002 ರಿಂದ ಜಾರಿಗೆ ಬರುವಂತೆ ನಗರ ಯೋಜನಾ ಇಲಾಖೆಗೆ ಸಮಾಲೋಚಕರನ್ನಾಗಿ ಒಪ್ಪಂದದ ಮೇರೆಗೆ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ದಿನಾಂಕ: 7.11.2002 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು.

ಮೇಲೆ ಓದಲಾದ (4)ರ ಪತ್ರದಲ್ಲಿ ನಗರ ಯೋಜನಾ ನಿರ್ದೇಶಕರು, ನಗರ ಯೋಜನಾ ಇಲಾಖೆಯಲ್ಲಿ ಅರ್ಬನ್ ಮ್ಯಾಪಿಂಗ್ ಅನ್ನು ವಿವಿಧ ತಾಂತ್ರಿಕತೆಗಳನ್ನು ಉಪಯೋಗಿಸಿಕೊಂಡು ಕೈಗೆತ್ತಿಕೊಳ್ಳಲು ಯೋಜನೆಯನ್ನು ಹಮ್ಮಿಕ್ರೊಂಡಿದ್ದು, ಇದೊಂದು ವಿಶೇಷ ತಜ್ಞತೆ ಹೊಂದಿರುವ ವಿಷಯವಾಗಿರುವುದರಿಂದ ಶ್ರೀ ಎಲ್.ಆರ್. ರುದ್ರಯ್ಯ ಇವರ ಸೇವೆಯು ಇಲಾಖೆಗೆ ಅತ್ಯಾವಶ್ಯಕವಾಗಿದೆಯೆಂದು ತಿಳಿಸುತ್ತ, ಇವರನ್ನು ಮುಂದುವರೆಸುವಂತೆ ಕೋರಿರುತ್ತಾರೆ. ಹಾಗೂ ಅವರ ಸಂಭಾವನೆಯನ್ನು ರೂ. 15,000 ರಿಂದ 25,000.00 ರೂಪಾಯಿಗಳಿಗೆ ಹೆಚ್ಚಿಸುವಂತೆ ಸಹ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 130 ನಯೋಸೇ 2004, ಬೆಂಗಳೂರು, ದಿನಾಂಕ: 19ನೇ ಜೂನ್ 2004**

ಶ್ರೀ ಎಲ್.ಆರ್. ರುದ್ರಯ್ಯ, ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ಇವರನ್ನು ದಿನಾಂಕ: 7.11.2003 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ನಗರ ಯೋಜನಾ ಇಲಾಖೆಗೆ ಸಮಾಲೋಚಕರನ್ನಾಗಿ ಒಪ್ಪಂದದ ಮೇರೆಗೆ ನೇಮಕ ಮಾಡಲಾಗಿದೆ.

**ಒಪ್ಪಂದದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳು ಈ ಕೆಳಕಂಡಂತೆ ಇರುತ್ತವೆ.**

1. ಶ್ರೀ ಎಲ್.ಆರ್. ರುದ್ರಯ್ಯ ನಗರ ಯೋಜನಾ ಜಂಟಿ ನಿರ್ದೇಶಕರು (ನಿವೃತ್ತ) ಇವರ ಒಪ್ಪಂದದ ನೇಮಕಾತಿ ಅವಧಿಯು ದಿನಾಂಕ: 7.11.2003 ರಿಂದ ಒಂದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಒಪ್ಪಂದದ ನೇಮಕಾತಿಗೆ ಕ್ರೋಢಿಕೃತ ಮಾಸಿಕ ಸಂಬಳ ರೂ. 15,000.00 (ಹದಿನೈದು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ನಿಗದಿಪಡಿಸಲಾಗಿದೆ. ಇದಲ್ಲದೆ ಇನ್ನಿತರೆ ಯಾವುದೇ ಭತ್ಯೆಗಳಿಗೆ ಅರ್ಹರಾಗಿರುವುದಿಲ್ಲ.
3. ಇವರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಬೇಕಾದಲ್ಲಿ ಇವರ ನಿವೃತ್ತ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನದ ಕಾಲ್ಪನಿಕ ಮೂಲ ವೇತನವಾದ ರೂ. 10,100.00 ಕ್ಕೆ ಲಭ್ಯವಾಗುವ ಪ್ರಯಾಣ ಭತ್ಯೆ ಹಾಗೂ ದಿನಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.
4. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಅರ್ಹರಾಗಿರುವುದಿಲ್ಲ.
5. ಸದರಿ ಅಧಿಕಾರಿಗಳು ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
6. ಶ್ರೀಯುತರನ್ನು ಕನ್ಸಲ್ಟೆಂಟ್ (ಸಮಾಲೋಚಕ) ಆಗಿ ನೇಮಕ ಮಾಡಿರುವ ಅವಧಿಯು ಯಾವುದೇ ಉದ್ದೇಶಕ್ಕೂ ಅರ್ಹತಾದಾಯಕ ಸೇವೆಯಲ್ಲವೆಂದು ಹಾಗೂ ರೂ. 15,000.00 ಸಂಚಿತ ಸಂಭಾವನೆ ಮೇಲೆ ಯಾವುದೇ ಭತ್ಯೆಗಳನ್ನು ಪಡೆಯುವಂತಿಲ್ಲ.
7. ಇವರು ತಮ್ಮ ಕರ್ತವ್ಯ, ಕಾರ್ಯ ಪ್ರಕಾರಗಳನ್ನು ಶ್ರದ್ಧೆ ಮತ್ತು ಆಸಕ್ತಿಯಿಂದ ನಿರ್ವಹಿಸತಕ್ಕದ್ದು.
8. ಇವರು ತಮ್ಮ ಕರ್ತವ್ಯಗಳನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
9. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
10. ಇವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಸರ್ಕಾರಕ್ಕೆ ತುಂಬಿಕೊಡಲು ಹೊಣೆಗಾರರಾಗಿರುತ್ತಾರೆ.
11. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 7 ದಿನಗಳೊಳಗಾಗಿ ರೂ. 50.00 ಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯು ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಒಪ್ಪಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ. ಆಇ 205 ವೆಚ್ಚ-9:04, ದಿನಾಂಕ: 2.6.04 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 657

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಶ್ರೀ ಮಾರುತಿ ಪವರ್ ಜೆನ್ (ಇಂಡಿಯ) ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಹೇಮಾವತಿ ಬಲದಂಡೆ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 95 ಎನ್‌ಸಿಇ 2000, ದಿನಾಂಕ: 10.7.2000.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹೇಮಾವತಿ/2004/1064, ದಿನಾಂಕ: 15.6.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಶ್ರೀ ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಹಾಸನ ಜಿಲ್ಲೆಯ ಗೊರೂರು ಗ್ರಾಮದ ಕಟ್ಟಾಯ ಹೋಬಳಿಯಲ್ಲಿ ಹೇಮಾವತಿ ಅಣೆಕಟ್ಟಿನ ಬಲ ದಂಡೆ ಕಾಲುವೆಯಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಯೋಜನೆಯು ಹಂಚಿಕೆ ಆಗಿರುವ ಸ್ಥಳದಲ್ಲಿ ಮೊದಲು ನೀರಾವರಿ ಇಲಾಖೆಯು 9 ಕ್ಯೂಮೆಕ್ಸ್ ನೀರನ್ನು ಕೆನಾಲ್‌ನಲ್ಲಿ ಬಿಡುತ್ತಿದ್ದು ಪ್ರಸ್ತುತ ಕೆನಾಲ್‌ನಲ್ಲಿ 15.4 ಕ್ಯೂಮೆಕ್ಸ್ ನೀರನ್ನು ಬಿಡುವುದಾಗಿ ತಿಳಿಸಿರುವುದರಿಂದ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 3 ಮೆಗಾ ವ್ಯಾಟ್‌ಗೆ ಹೆಚ್ಚಿಸುವಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

3. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 169 ಎನ್‌ಸಿಇ 2004, ಬೆಂಗಳೂರು, ದಿನಾಂಕ: 18ನೇ ಜೂನ್ 2004**

4. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಮೆಸರ್ಸ್ ಶ್ರೀ ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಹಾಸನ ಜಿಲ್ಲೆಯ ಗೊರೂರು ಗ್ರಾಮದ ಕಟ್ಟಾಯ ಹೋಬಳಿಯಲ್ಲಿ ಹೇಮಾವತಿ ಅಣೆಕಟ್ಟಿನ ಬಲ ದಂಡೆ ಕಾಲುವೆಯಲ್ಲಿ ಹಂಚಿಕೆ ಮಾಡಲಾದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಹಂಚಿಕೆ ಆದೇಶದ ನಿಬಂಧನೆಗಳಿಗೊಳಪಟ್ಟು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 658

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಶ್ರೀ ಮಾರುತಿ ಪವರ್ ಜೆನ್ (ಇಂಡಿಯ) ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, ಹಂಚಿಕೆಯಾಗಿರುವ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಬಿನಿ ಬಲದಂಡೆ ಕಾಲುವೆ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 54 ಎನ್‌ಸಿಇ 1999 (5), ದಿನಾಂಕ: 9.7.1999.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 107 ಎನ್‌ಸಿಇ 1999, ದಿನಾಂಕ: 22.3.2001.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕಬಿನಿ/2004/1065, ದಿನಾಂಕ: 15.6.2004.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಮೆಸರ್ಸ್ ಶ್ರೀ ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಮೈಸೂರು ಜಿಲ್ಲೆಯ ಕಬಿನಿ ಬಲ ದಂಡೆ ಕಾಲುವೆಯಲ್ಲಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ತದನಂತರ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಹಂಚಿಕೆ ಆಗಿರುವ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

3. ಯೋಜನೆಯು ಹಂಚಿಕೆ ಆಗಿರುವ ಸ್ಥಳದಲ್ಲಿ ಮೊದಲು ನೀರಾವರಿ ಇಲಾಖೆಯು 1400 ಕ್ಯೂಸೆಕ್ಸ್ ನೀರನ್ನು ಕೆನಾಲ್‌ನಲ್ಲಿ ಬಿಡುತ್ತಿದ್ದು ಪ್ರಸ್ತುತ ಕೆನಾಲ್‌ನಲ್ಲಿ 1800 ಕ್ಯೂಸೆಕ್ಸ್ ನೀರನ್ನು ಬಿಡುವುದಾಗಿ ತಿಳಿಸಿರುವುದರಿಂದ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ನಿಂದ 5 ಮೆಗಾ ವ್ಯಾಟ್‌ಗೆ ಹೆಚ್ಚಿಸುವಂತೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

4. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 171 ಎನ್‌ಸಿಇ 2004, ಬೆಂಗಳೂರು, ದಿನಾಂಕ: 18ನೇ ಜೂನ್ 2004**

5. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಮೆಸರ್ಸ್ ಶ್ರೀ ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಮೈಸೂರು ಜಿಲ್ಲೆಯ ಕಬಿನಿ ಬಲ ದಂಡೆ ಕಾಲುವೆಯಲ್ಲಿ ಹಂಚಿಕೆ ಮಾಡಲಾದ 3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಹಂಚಿಕೆ ಆದೇಶದ ನಿಬಂಧನೆಗಳಿಗೊಳಪಟ್ಟು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 659

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,ಇಂಧನ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ರಮೇಶ್‌ರಾವ್, ನಿವೃತ್ತ ಸಹ ನಿರ್ದೇಶಕರು, ಇವರಿಗೆ ಆರೋಗ್ಯಾಧಿಕಾರಿ ಮತ್ತು ಸಹಾಯಕ ಶಸ್ತ್ರ ಚಿಕಿತ್ಸಕರು, ದರ್ಜೆ-1 ಹುದ್ದೆಯಿಂದ ಆರೋಗ್ಯಾಧಿಕಾರಿ ದರ್ಜೆ-1 (ಕಿರಿಯ) ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಕರ್ನಾಟಕ ಆಡಳಿತ ನ್ಯಾಯಮಂಡಳಿ ಅರ್ಜಿ ಸಂ. 5744/99, ದಿನಾಂಕ: 23.10.89.
2. ಆಯುಕ್ತರು, ಆಕುಕ ಸೇವೆಗಳು, ಇವರ ಪತ್ರ ಸಂಖ್ಯೆ: ಹಿಶ್ರೇಅ:77/99-2000, ದಿನಾಂಕ: 10.5.2004.

**ಪ್ರಸ್ತಾವನೆ:**

ಡಾ: ರಮೇಶ್ ರಾವ್, ಇವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿದ ಅರ್ಜಿ ಸಂಖ್ಯೆ: 5744/99 ರ ಬಗ್ಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 23.1.1989 ಕರ್ನಾಟಕ ಆಡಳಿತ ನ್ಯಾಯ ಮಂಡಳಿ ತೀರ್ಪಿನಲ್ಲಿ ಈ ಕೆಳಕಂಡಂತೆ ಕ್ರಮ ತೆಗೆದುಕೊಳ್ಳಲು ಆದೇಶಿಸಲಾಗಿದೆ.

(i) ಡಾ: ರಮೇಶ್‌ರಾವ್ ರವರ ಹೆಸರನ್ನು ಆರೋಗ್ಯಾಧಿಕಾರಿ : ಸಹಾಯಕ ಶಸ್ತ್ರ ಚಿಕಿತ್ಸಕರ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡುವುದು.

(ii) ಈ ರೀತಿ ಸೇರ್ಪಡೆ ಮಾಡಿದ ನಂತರ ಪದೋನ್ನತಿಗಳಲ್ಲಿ ಬದಲಾವಣೆಗಳು ಆಗಬಹುದಾದ ಸನ್ನಿವೇಶದಲ್ಲಿ ಅರ್ಜಿದಾರರು ಅಂತಿಮ ಪದೋನ್ನತಿಗೆ ಅರ್ಹರಾದಲ್ಲಿ ಅವರಿಗೆ ಲಭ್ಯವಾಗುವ ಎಲ್ಲಾ ಸೌಲಭ್ಯಗಳೊಂದಿಗೆ ನಿಯಮಾನುಸಾರ ಪರಿಶೀಲಿಸಿ ಪರಿಗಣಿಸುವುದು.

2. ಡಾ: ರಮೇಶ್‌ರಾವ್, ಸಹನಿರ್ದೇಶಕರು, (ಆಸ್ಪತ್ರೆಗಳು) ಇವರು ತಮ್ಮ ಸನಿಹದ ಸೇವಾ ಕಿರಿಯರಾದ ಡಾ: ನಳಿನಿ ಎಂ. ಬೇವನೂರ, ಇವರಿಗೆ ಆರೋಗ್ಯಾಧಿಕಾರಿ, ದರ್ಜೆ-1 (ಕಿರಿಯ) ವೃಂದಕ್ಕೆ ಪದೋನ್ನತಿ ನೀಡಿದ ದಿನಾಂಕದಿಂದ ಅನ್ವಯವಾಗುವಂತೆ ಪದೋನ್ನತಿ ಕೋರಿದ್ದಾರೆ. ಸರ್ಕಾರಿ ಆದೇಶ ಸಂಖ್ಯೆ: ಆಕುಕ 5 ಎಂಎಸ್‌ಟಿ 91 ದಿನಾಂಕ: 13.3.1997 ರಲ್ಲಿ ಡಾ: ರಮೇಶ ರಾವ್ ಇವರನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 552 ಹೆಚ್‌ಎಸ್‌ಹೆಚ್ 77 ದಿನಾಂಕ: 5.2.1982 ರಲ್ಲಿ ಪ್ರಕಟವಾಗಿರುವ ಆರೋಗ್ಯಾಧಿಕಾರಿ ಹಾಗೂ ಸಹಾಯಕ ಶಸ್ತ್ರ ಚಿಕಿತ್ಸಕ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಕ್ರಮಸಂಖ್ಯೆ: 193 (ಎ) ಎಂಬಲ್ಲಿ ನಿಗದಿಪಡಿಸಲಾಗಿದೆ. ಡಾ: ಎನ್.ಕೆ. ಧನ್ವಂತರಿ, (ಡಾ: ನಳಿನಿ ಎಂ. ಬೇವನೂರ) ಇವರ ಮೇಲಿನ ಸ್ಥಾನ ನೀಡಲಾಗಿದೆ. ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 618 ಎಂಎಸ್ಎ 80 ದಿನಾಂಕ: 23.2.81 ರ ಕ್ರಮ ಸಂಖ್ಯೆ: 152 ರಲ್ಲಿ ಡಾ: ನಳಿನಿ ಎಂ. ಬೇವನೂರ, ಇವರಿಗೆ ಆರೋಗ್ಯಾಧಿಕಾರಿ ದರ್ಜೆ-1 (ಕಿರಿಯ) ವೃಂದಕ್ಕೆ ಪದೋನ್ನತಿ ನೀಡಲಾಗಿದೆ. ಡಾ: ರಮೇಶ್ ರಾವ್, ಇವರಿಗೆ ಈ ವೃಂದಕ್ಕೆ ದಿನಾಂಕ: 7.1.86 ರಿಂದ ಪದೋನ್ನತಿ ನೀಡಲಾಗಿದೆ.

3. ಆದ್ದರಿಂದ ಡಾ: ರಮೇಶ್‌ರಾವ್, ಇವರಿಗೆ ದಿನಾಂಕ: 23.2.81 ರಿಂದ ಜೇಷ್ಠತೆಯಲ್ಲಿ ಕಿರಿಯರಾದ ಡಾ: ನಳಿನಿ ಎಂ. ಬೇವನೂರ, ಇವರಿಗೆ ಆರೋಗ್ಯಾಧಿಕಾರಿ ದರ್ಜೆ-1 (ಕಿರಿಯ) ವೃಂದಕ್ಕೆ ಪದೋನ್ನತಿ ನೀಡಿದ ದಿನಾಂಕದಿಂದ ಪೂರ್ವಾನ್ವಯವಾಗಿ ಬಡ್ತಿ ನೀಡುವಂತೆ, ಮೇಲೆ (2) ರಲ್ಲಿ ಓದಲಾದ ದಿನಾಂಕ: 10.5.2004 ರ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

4. ಡಾ: ರಮೇಶ್‌ರಾವ್ ಇವರು ದಿನಾಂಕ: 1.5.2000 ರಂದು ವಯೋನಿವೃತ್ತಿ ಹೊಂದಿರುತ್ತಾರೆ. ಮೇಲ್ಕಂಡ ಹಿನ್ನೆಲೆಯಲ್ಲಿ ಡಾ: ರಮೇಶ್‌ರಾವ್, ನಿವೃತ್ತ ವೈದ್ಯಾಧಿಕಾರಿ, ಇವರಿಗೆ ಸೇವೆಯಲ್ಲಿ ಇವರಿಗಿಂತ ಕಿರಿಯರಾದ ಡಾ: ನಳಿನಿ ಎಂ. ಬೇವನೂರ (ಡಾ: ಎನ್.ಕೆ. ಧನ್ವಂತರಿ) ಇವರಿಗೆ ಆರೋಗ್ಯಾಧಿಕಾರಿ ದರ್ಜೆ-1 (ಕಿರಿಯ) ಹುದ್ದೆಗೆ ಬಡ್ತಿ ನೀಡಿದ ದಿನಾಂಕದಿಂದ ಅಂದರೆ ದಿನಾಂಕ: 23.2.81 ರಿಂದ ಪೂರ್ವಾನ್ವಯವಾಗಿ ಅನ್ವಯವಾಗುವಂತೆ ಆರೋಗ್ಯಾಧಿಕಾರಿ ದರ್ಜೆ-1 (ಕಿರಿಯ) ಹುದ್ದೆಗೆ ಬಡ್ತಿ ನೀಡಲು ಕರ್ನಾಟಕ ಸಿವಿಲ್ ಸೇವೆಗಳು (ಬಡ್ತಿ ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಾವಳಿಗಳು 1978 ನಿಯಮ 2(2)ರ ಪ್ರಕಾರ ಬಡ್ತಿ ನೀಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 78 ಎಂಎಸ್‌ಎಸ್ 2004, ಬೆಂಗಳೂರು, ದಿನಾಂಕ: 19ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ರಮೇಶ್ ರಾವ್, ನಿವೃತ್ತ ವೈದ್ಯಾಧಿಕಾರಿ, ಇವರಿಗೆ ದಿನಾಂಕ: 23.2.1981 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಆರೋಗ್ಯಾಧಿಕಾರಿ ದರ್ಜೆ-1 (ಕಿರಿಯ) ಹುದ್ದೆಗೆ ಕರ್ನಾಟಕ ಸಿವಿಲ್ ಸೇವೆಗಳು (ಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಾವಳಿಗಳು 1978 ನಿಯಮ 2(2) ರಡಿಯಲ್ಲಿ ಬಡ್ತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 661

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಕೆ. ಲಕ್ಷ್ಮಣ್, ಶ್ರೀ ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಗಳು, ಶ್ರೀ ಜಿ. ನರಸಿಂಹಮೂರ್ತಿ ಪ್ರಥಮ ದರ್ಜೆ ರಾಜಸ್ವ ನಿರೀಕ್ಷಕರು, ಶ್ರೀ ಗುರುಲಿಂಗಯ್ಯ ಗ್ರಾಮ ಲೆಕ್ಕಿಗರು, ಮಧು ದ್ವಿತೀಯ ದರ್ಜೆ ಸಹಾಯಕರು, ಶಬೀನ್ ತಾಜ್, ದ್ವಿತೀಯ ದರ್ಜೆ ಸಹಾಯಕರು, ಮೈಕಲ್ ಬೆಂಜಮಿನ್ ದ್ವಿತೀಯ ದರ್ಜೆ ಸಹಾಯಕರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**

1. ನೋಟೀಸ್ ಸಂಖ್ಯೆ: ಸಿಆಸುಇ 110 ಎಸ್‌ಇಎನ್ 2001, ದಿನಾಂಕ: 6.5.2002.
2. ನೋಟೀಸ್ ಸಂಖ್ಯೆ: ಕಂಇ 30 ಎಡಿಇ 2000, ದಿನಾಂಕ: 28.9.2001.
3. ಶ್ರೀ ಎಸ್.ಕೆ. ಲಕ್ಷ್ಮಣ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ (ದಿನಾಂಕ: 28.1.2003), ಶ್ರೀ ನಾಗರಾಜು ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ (28.8.2002), ಶ್ರೀ ಜಿ. ನರಸಿಂಹಮೂರ್ತಿ, ಪ್ರಥಮ ದರ್ಜೆ ರಾಜ್ಯ ನಿರೀಕ್ಷಕರು (22.10.2001), ಗುರುಲಿಂಗಯ್ಯ (ದಿನಾಂಕ: 21.11.2001) ಮಧು ದ್ವಿತೀಯ ದರ್ಜೆ ಸಹಾಯಕರು (ದಿನಾಂಕ: 21.11.2001) ಶಬೀನ್ ತಾಜ್ ದ್ವಿತೀಯ ದರ್ಜೆ ಸಹಾಯಕರು (ದಿನಾಂಕ: 20.10.2001), ಮೈಕಲ್ ಬೆಂಜಮಿನ್ (ದಿನಾಂಕ: 24.10.2001) ಇವರುಗಳ ಉತ್ತರಗಳು.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ತಾಲ್ಲೂಕಿನಲ್ಲಿ ಕ್ರಮವಾಗಿ ಶ್ರೀ ಎಸ್.ಕೆ. ಲಕ್ಷ್ಮಣ್ ಮತ್ತು ಶ್ರೀ ನಾಗರಾಜ್ ಅವರುಗಳು ತಹಶೀಲ್ದಾರ್ ಹುದ್ದೆಯಲ್ಲಿ, ಶ್ರೀ ಜಿ. ನರಸಿಂಹಮೂರ್ತಿ ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು ಅವರು ಪ್ರಥಮ ದರ್ಜೆ ಸಹಾಯಕ ಹುದ್ದೆಯಲ್ಲಿ, ಶ್ರೀ ಗುರುಲಿಂಗಯ್ಯ ಗ್ರಾಮ ಲೆಕ್ಕಿಗರು ಅವರು ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ, ಮಧು, ಶಬೀನ್‌ತಾಜ್, ಮೈಕೆಲ್ ಬೆಂಜಮಿನ್ ದ್ವಿತೀಯ ದರ್ಜೆ ಸಹಾಯಕರುಗಳು ಅವರುಗಳು ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ರಾಮನಗರ ತಾಲ್ಲೂಕು ಬಿಡದಿ ಹೋಬಳಿಯ ಶಾನುಮಂಗಲ, ಬಳಿ ವೀರನಹಳ್ಳಿ ಮತ್ತು ಅಬ್ಬನ್ ಕುಪ್ಪೆ ಗ್ರಾಮಗಳ ವ್ಯಾಪ್ತಿಯಲ್ಲಿ ಅನಧಿಕೃತವಾಗಿ ಸರ್ಕಾರಿ ಜಮೀನುಗಳನ್ನು ಸಾಗುವಳಿ ಮಾಡುತ್ತಿದ್ದ ರೈತರುಗಳಿಗೆ ಜಮೀನನ್ನು ಸಕ್ರಮೀಕರಣ ಮಾಡಿಕೊಳ್ಳಲು ನಿಗದಿತ

ನಮೂನೆಗಳಲ್ಲಿ ಅರ್ಜಿ ಸಲ್ಲಿಸುವಂತೆ ಕೋರಿ, ಅರ್ಜಿ ಸಲ್ಲಿಸಲು ದಿನಾಂಕ: 19.9.91 ರವರೆಗೆ ಅವಕಾಶ ನೀಡಲಾಗಿದ್ದರೂ ಸಹ ಸದರಿ ಅವಧಿಯೊಳಗೆ ಸಲ್ಲಿಸದೇ ಕೆಲವೊಂದು ರೈತರುಗಳು ಅವಧಿ ನಂತರ ಸಲ್ಲಿಸಲಾದ ಅರ್ಜಿಗಳನ್ನು ಕಾನೂನುಬಾಹಿರವಾಗಿ ವಹಿಗಳಲ್ಲಿ ನಮೂದಿಸಿ ಸಕ್ರಮಗೊಳಿಸಿ, ಅವುಗಳು ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಮಂಡಳಿಗೆ ಸ್ವಾಧೀನವಾಗಲು ಸಹಕರಿಸಿ ಆ ಜಮೀನುಗಳಿಗೆ ಭೂ ಪರಿಹಾರಧನ ಪಾವತಿಸುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿದ ಆರೋಪಕ್ಕಾಗಿ ಮೇಲ್ಕಂಡ ಅಧಿಕಾರಿ : ನೌಕರರುಗಳಿಗೆ ಮೇಲೆ (1) ಮತ್ತು (2) ರಲ್ಲಿ ಓದಲಾದ ದಿನಾಂಕ: 28.9.2001 ಮತ್ತು 6.5.2002 ರ ನೋಟೀಸ್ ಜಾರಿ ಮಾಡುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸ್‌ಗೆ ಆರೋಪಿ ಅಧಿಕಾರಿ : ನೌಕರರು ಮೇಲೆ (2) ರಲ್ಲಿ ಓದಲಾದ ವಿವಿಧ ದಿನಾಂಕಗಳ ಉತ್ತರ ಸಲ್ಲಿಸಿ ಆರೋಪಗಳನ್ನು ನಿರಾಕರಿಸಿದ್ದಾರೆ.

ಆರೋಪಿತ ಅಧಿಕಾರಿ : ನೌಕರರ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 110 ಎಸ್‌ಇಎನ್ 2001(1), ಬೆಂಗಳೂರು, ದಿನಾಂಕ: 21ನೇ ಮೇ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು,

1. ಎಸ್.ಕೆ. ಲಕ್ಷ್ಮಣ್ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ
2. ನಾಗರಾಜ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ
3. ಜಿ. ನರಸಿಂಹಮೂರ್ತಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕ
4. ಗುರುಲಿಂಗಯ್ಯ, ಗ್ರಾಮಲೆಕ್ಕಿಗರು
5. ಮಧು, ದ್ವಿತೀಯ ದರ್ಜೆ ಸಹಾಯಕ
6. ಶಬೀನ್ ತಾಜ್, ದ್ವಿತೀಯ ದರ್ಜೆ ಸಹಾಯಕರು
7. ಮೈಕಲ್ ಬೆಂಜಮಿನ್, ದ್ವಿತೀಯ ದರ್ಜೆ ಸಹಾಯಕರು

ಇವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರಿಗೆ 5000.00 ರೂಪಾಯಿಗಳ ಗೌರವಧನ ನೀಡಲಾಗುವುದು. ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರಲ್ಲಿ ನಿಗದಿಪಡಿಸಿರುವಂತೆ ಅವರು ವಾಹನ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನ ಸಹಾಯಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಜಿಲ್ಲಾಧಿಕಾರಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆ ಅವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು 3 ತಿಂಗಳೊಳಗಾಗಿ ಮುಗಿಸಿ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 662

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ನಿರ್ದೇಶಕರು (ಸ್ವ ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 448 ಎಸ್‌ಎಎಸ್ 2001, ದಿನಾಂಕ: 8.7.2003.
2. ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ ಗ್ರಾಅಪ 15 ಎಂಸಿಆರ್ 2003, ದಿನಾಂಕ: 14.5.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 8.7.2003 ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ : ಜಂಟಿ ಕಾರ್ಯದರ್ಶಿ : ಅಪರ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 25.6.2003 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿರುತ್ತದೆ. ಪ್ರಸ್ತುತ ವಿಸ್ತರಿಸಲ್ಪಟ್ಟ ಒಂದು ವರ್ಷದ ಅವಧಿಯು ದಿನಾಂಕ: 24.6.2004ಕ್ಕೆ ಮುಕ್ತಾಯಗೊಳ್ಳಲಿದೆ.

ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 14.5.2004ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಯನ್ನು ದಿನಾಂಕ: 25.6.2004 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 42 ಸಸಿವಿ 2004, ಬೆಂಗಳೂರು, ದಿನಾಂಕ: 9ನೇ ಜೂನ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ನಿರ್ದೇಶಕರು (ಸ್ವ ಉದ್ಯೋಗ ಕಾರ್ಯಕ್ರಮ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 25.6.2004 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ನೀಡಿರುವ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 665

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು-2)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯಃ** ಶ್ರೀ ಬಿ.ಎಂ.ತಿರುಕನಗೌಡರ್, ನಗರ ಯೋಜನಾ ಜಂಟಿ ನಿರ್ದೇಶಕರು ಇವರನ್ನು ಹುಬ್ಬಳ್ಳಿ-ಧಾರವಾಡ, ನಗರಾಭಿವೃದ್ಧಿ ಪ್ರಾಧಿಕಾರದ ನಗರ ಯೋಜನಾ ಸದಸ್ಯರನ್ನಾಗಿ ನಿಯೋಜಿಸಿದ ಬಗ್ಗೆ ಸೇವಾ ಷರತ್ತು ಮತ್ತು ನಿಬಂಧನೆಗಳ ಕುರಿತು.

**ಓದಲಾಗಿದೆಃ** 1. ಅಧಿಸೂಚನೆ ಸಂಖ್ಯೆಃನಅಇಃ57:ನಯೋಸೆ 02 ದಿಃ27-3-1999.
2. ಆಯುಕ್ತರು, ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆಃ ಹು.ಧಾ.ನಪ್ರಾಃಸಿಬ್ಬಂದಿಃಸಿಆರ್ 125:2003-04/6780 ದಿಃ 20-2-2004.

**ಪ್ರಸ್ತಾವನೆಃ**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇಃ57: ನಯೋಸೇ 02 ದಿಃ 30-12-2003 ರಲ್ಲಿ ಶ್ರೀ ಬಿ.ಎಂ.ತಿರುಕನಗೌಡರ್, ನಗರ ಯೋಜನಾ ಜಂಟಿ ನಿರ್ದೇಶಕರು ಇವರನ್ನು ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ, ಹುಬ್ಬಳ್ಳಿ ಇಲ್ಲಿನ ನಗರ ಯೋಜನಾ ಸದಸ್ಯರ ಹುದ್ದೆಗೆ ಮುಂಬಡ್ತಿ ನೀಡಿ ನೇಮಿಸಲಾಗಿದೆ. ಅದರಂತೆ ಶ್ರೀ ಬಿ.ಎಂ.ತಿರುಕನಗೌಡರ್, ನಗರ ಯೋಜನಾ ಜಂಟಿ ನಿರ್ದೇಶಕರು ಇವರು ದಿ 5-1-2004ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರಲ್ಲಿ ಆಯುಕ್ತರು, ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ, ಹುಬ್ಬಳ್ಳಿ ಇವರು ತಮ್ಮಪತ್ರದಲ್ಲಿ ಇವರ ಎರವಲು ಸೇವೆಗೆ ಸಂಬಂಧಿಸಿದ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಲು ಕೋರಿರುತ್ತಾರೆ.

ಈ ವಿಷಯವನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆಃ ನಅಇ 60 ನಯೋಸೇ 2004 ಬೆಂಗಳೂರು ದಿಃ 21ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ ಶ್ರೀ ಬಿ.ಎಂ.ತಿರುಕನಗೌಡರ್, ನಗರ ಯೋಜನಾ ಜಂಟಿ ನಿರ್ದೇಶಕರು ನಿಯೋಜನೆ ಮೇಲೆ ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ, ಇವರಿಗೆ ಸಂಬಂಧಿಸಿದ ಷರತ್ತು ಮತ್ತು ನಿಬಂಧನೆಗಳು ಈ ಕೆಳಕಂಡಂತಿರುತ್ತದೆ.

1. **ಪ್ರತಿ ನಿಯೋಜನೆಯ ಅವಧಿಃ-** ಅನ್ಯ ಸೇವೆಯ ಪ್ರತಿ ನಿಯೋಜನೆಯ ಪ್ರಾರಂಭಿಕ ಅವಧಿಯು ದಿಃ 5-1-2004 ರಿಂದ 3 ವರ್ಷ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇರುತ್ತದೆ.
2. **ಅನ್ಯ ಸೇವೆಯ ಮೇಲಿನ ಪ್ರತಿನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿಃ-** ಅನ್ಯ ಸೇವೆಯ ಮೇಲಿನ ಪ್ರತಿ ನಿಯೋಜನೆಯ ಅವಧಿಯು ಶ್ರೀ ಬಿ.ಎಂ.ತಿರುಕನಗೌಡರ್, ನಗರ ಯೋಜನಾ ಜಂಟಿ ನಿರ್ದೇಶಕರು, ಹುಬ್ಬಳ್ಳಿ-ಧಾರವಾಡ, ನಗರಾಭಿವೃದ್ಧಿ ಪ್ರಾಧಿಕಾರದ ನಗರ ಯೋಜನಾ ಸದಸ್ಯರ ಹುದ್ದೆಯ ಕಾರ್ಯಭಾರ ವಹಿಸಿಕೊಂಡ ದಿಃ 5-1-2004ರಿಂದ ಪ್ರಾರಂಭವಾಗುವುದು, ಮತ್ತು ಹುಬ್ಬಳ್ಳಿ-ಧಾರವಾಡ, ನಗರಾಭಿವೃದ್ಧಿ ಪ್ರಾಧಿಕಾರದ ನಗರ ಯೋಜನಾ ಸದಸ್ಯರ ಹುದ್ದೆಯ ಕಾರ್ಯಭಾರ ವಹಿಸಿಕೊಡುವ ದಿನಾಂಕದಂದು ಮುಕ್ತಾಯಗೊಳ್ಳುವುದು.
3. **ತುಟ್ಟಿಭತ್ಯೆಃ** ಮನೆಬಾಡಿಗೆ ಭತ್ಯೆಃನಗರ ಪರಿಹಾರ ಭತ್ಯೆಃ ತುಟ್ಟಿಭತ್ಯೆಃಮನೆಬಾಡಿಗೆ ಭತ್ಯೆಃನಗರ ಪರಿಹಾರ ಭತ್ಯೆಯ ಪಾವತಿಯ ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ಕ್ರಮಗೊಳಿಸಲಾಗುವುದು.
4. **ಸೇರುವ ಕಾಲ, ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣಭತ್ಯೆಃ** ಅವುಗಳನ್ನು ಅನ್ಯಸೇವೆಯ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರದ ನಿಯಮಗಳ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು. ಮತ್ತು ಇವುಗಳನ್ನು ಅನ್ಯ ನಿಯೋಜಕನು ಪಾವತಿ ಮಾಡತಕ್ಕದ್ದು.
5. **ಪ್ರಯಾಣಭತ್ಯೆಃ** ಅನ್ಯಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಅನ್ಯ ನಿಯೋಜಕನಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಸರ್ಕಾರಿ ನೌಕರನು ಅರ್ಹನಾಗಿರುತ್ತಾನೆ.
6. **ರಜೆ ನಿಯಮಗಳುಃ** ರಾಜ್ಯ ಸರ್ಕಾರದಲ್ಲಿ ಅವನಿಗೆ ಅನ್ವಯವಾಗುವ ರಜೆ ನಿಯಮಗಳಿಗೆ ಒಳಪಟ್ಟಿರುತ್ತಾನೆ.
7. **ರಜೆ ಪ್ರಯಾಣ ರಿಯಾಯಿತಿಃ** ರಾಜ್ಯ ಸರ್ಕಾರದಲ್ಲಿ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಸರ್ಕಾರಿ ನೌಕರನು ಅರ್ಹರಾಗಿರುತ್ತಾರೆ.

8. **ಕರ್ನಾಟಕ ಸರ್ಕಾರಿ ಸೇವಾ ನಿಯಮಗಳ ಅನುಬಂಧ–** 'ಸಿ' ಯಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗಧೀಕರಣ ಸೌಲಭ್ಯಕ್ಕೆ ಸರ್ಕಾರಿ ನೌಕರನು ಅರ್ಹನಾಗಿರುತ್ತಾನೆ.

9. **ವೈದ್ಯಕೀಯ ರಿಯಾಯಿತಿಗಳುಃ** 1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಹಾರ) ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆ ಇಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಸರ್ಕಾರಿ ನೌಕರನು ಅರ್ಹನಾಗಿರುತ್ತಾನೆ. ಮತ್ತು ಅದರ ಬಾಬ್ತಿನ ವೆಚ್ಚವನ್ನು ಅನ್ಯ ನಿಯೋಜಕನೆ ಭರಿಸತಕ್ಕದ್ದು.

10. **ದುರ್ಬಲತೆ ರಜೆಃ ಅನ್ಯ ನಿಯೋಜಕನ ಬಳಿ ಸೇವೆಯಲ್ಲಿರುವಾಗ ಮತ್ತುಃ** ಅಥವಾ ಸೇವೆಯ ಮೂಲಕ ಸಂಭವಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ಅನ್ಯ ನಿಯೋಜಕನ ಬಳಿಯಲ್ಲಿನ ಸೇವೆಯು ಕೈಗೊಂಡ ನಂತರ ಕಂಡು ಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯ ನಿಯೋಜಕನು ಬದ್ಧನಾಗಿರುತ್ತಾನೆ.

11. **ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಃ**

(ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ಅನ್ಯ ನಿಯೋಜಕನು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

| | |
|---|---|
| (1) ರಜೆ ವೇತನ ಅಂಶದಾನ | ಅನ್ಯ ಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯು ಸೇರಿದಂತೆ ಪಡೆಯುವ ಸಂಬಳದ ಶೇ.11 ರಷ್ಟು |
| (2) ನಿವೃತ್ತಿ ವೇತನ ಅಂಶದಾನ | ಕಾಲಕಾಲಕ್ಕೆ ಪಡೆಯುವ ವೇತನದ ಎಂಟನೇ ಒಂದು ಭಾಗ. ಈ ಉದ್ದೇಶಕ್ಕೆ 'ವೇತನ' ಎಂದರೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 37 ಎಸ್‌ಆರ್‌ಎಸ್ 87 ದಿಃ11–2–88 ರಲ್ಲಿ ವಿವರಿಸಲಾದ ವೇತನ ಎಂದು ಅರ್ಥ. |

(ಆ) ಅನ್ಯ ನಿಯೋಜಕನು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯ ಸೇವೆಯು ಮುಗಿದು ಹೋದಂದಿನಿಂದ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ಪಾವತಿ ಮಾಡತಕ್ಕದ್ದು. ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗೆ ಸಂದಾಯ ಮಾಡತಕ್ಕದ್ದು.

(ಅ) ರಜೆ ವೇತನ ಅಂಶದಾನ

| | | |
|---|---|---|
| 1 | ಅಖಿಲ ಭಾರತ ಸೇವೆಯ ಅಧಿಕಾರಿಗಳ ಪ್ರಕರಣದಲ್ಲಿ | 0070 ಇತರೆ ಆಡಳಿತ ಸೇವೆಗಳು 00–60– ಇತರೆ ಸೇವೆಗಳು 800 ಇತರೆ ಜಮೆಗಳು 13 ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ. |
| 2 | ಇತರ ಪ್ರಕರಣದಲ್ಲಿ | |
| ಅ | ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ ಸಂಬಂಧದ ಜಮೆ ಶೀರ್ಷಿಕೆ 800 ಇತರೆ ಜಮೆಗಳು– ರಜೆ ವೇತನದ ಅಂಶದಾನ |
| ಆ | ಸರಿ ಹೊಂದುವ ಜಮೆ ಶೀರ್ಷಿಕೆ ಇಲ್ಲದೆ ಹೋದಲ್ಲಿ | |
| 1 | ಸಾಮಾನ್ಯ ಸೇವೆಗಳು ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 0075 ಇತರೆ ಸಾಮಾನ್ಯ ಸೇವೆಗಳು 800 ಇತರೆ ಜಮೆಗಳು ರಜೆ ವೇತನ ಅಂಶದಾನ |
| 2 | 'ಸಾಮಾಜಿಕ ಮತ್ತು ಸಾಮೂದಾಯಿಕ ಸೇವೆಗಳು' ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 00250 ಇತರೆ ಸಾಮಾಜಿಕ ಸೇವೆಗಳು 800 ಇತರೆ ಜಮೆಗಳು ರಜೆ ವೇತನ ಅಂಶದಾನ |
| 3 | 'ಆರ್ಥಿಕ ಸೇವೆಗಳು' ಇದರ ಅಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | 1475 ಇತರೆ ಸಾಮಾನ್ಯ ಆರ್ಥಿಕ ಸೇವೆಗಳು 800 ಇತರೆ ಜಮೆಗಳು ರಜೆ ವೇತನ ಅಂಶದಾನ |

(ಆ) ನಿವೃತ್ತಿ ವೇತನಃ 0071 ನಿವೃತ್ತಿ ವೇತನ ಮತ್ತು ಇತರೆ ನಿವೃತ್ತಿ ಸೌಲಭ್ಯಗಳ ಬಗ್ಗೆ ಅನುದಾನ ಮತ್ತು ವಸೂಲಿಗಳು–101 ಚಂದಾಗಳು ಮತ್ತು ಅಂಶದಾನಗಳು 03 ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06 ನಿವೃತ್ತಿ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅನುದಾನ.

(ಇ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶ ದಾನಗಳನ್ನು ಪಾವತಿ ಮಾಡದಿದ್ದರೆ ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು ಪಾವತಿ ಮಾಡದಿರುವ ಅಂಶ ದಾನದ ಮೇಲೆ ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಂದು ಅಂಶದಾನವನ್ನು ಅಂತಿಮವಾಗಿ ಪಾವತಿ ಮಾಡುವ ದಿನಾಂಕದವರೆಗೆ ಪ್ರತಿ 100.00 ರೂ ಗಳಿಗೆ ದಿನಂಪ್ರತಿ 2ಪೈಸೆ ದರದಲ್ಲಿ ಬಡ್ಡಿಯನ್ನು ಅನ್ಯನಿಯೋಜಕನು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

12. **ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಃ–** ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಗೆಯನ್ನು ಪ್ರತಿ ನಿಯೋಜಕ ನೌಕರನ ವೇತನದಿಂದ ವಸೂಲು ಮಾಡುವುದು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ಸಾಮೂಹಿಕ ವಿಮಾ ಯೋಜನೆಯ ಅನುಬಂಧ 'ಎ' ದಲ್ಲಿನ ಅನುಸೂಚಿಯೊಂದಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ

ಇಲಾಖೆ (ಲೆಕ್ಕಪತ್ರ) ಇವರ ಹೆಸರಿಗೆ ಕ್ಯಾಷ್ ಮಾಡಿದ ಚೆಕ್ ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮೆ ಮಾಡಲು ಕಳುಹಿಸಿಕೊಡತಕ್ಕದ್ದು.

13. **ಕರ್ನಾಟಕ ರಾಜ್ಯ ಸರ್ಕಾರಿ ಸಾಮೂಹಿಕ ವಿಮಾ ಇಲಾಖೆಯ ನಿಮ್ಮ ಪತ್ರಃ ಸಾಮಾನ್ಯ ಭವಿಷ್ಯ ನಿಧಿಗೆ ಚಂದಾಃ–** ಅನ್ಯ ಸೇವೆಯ ಮೇಲೆ ಪ್ರತಿ ನಿಯೋಜನೆ ಹೋಗುವ ಸಮಯದಲ್ಲಿ ಕೆಜಿಐಡಿ ನಿಯಮಗಳು ಜಿಪಿಎಫ್ ನಿಯಮಗಳ ಪ್ರಕಾರ ಚಂದಾ ನೀಡುತ್ತಿದ್ದ ಕೆಜಿಐಡಿ ಜಿಪಿಎಫ್ ನಲ್ಲಿಯ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಸರ್ಕಾರಿ ನೌಕರನು ಮುಂದುವರೆಸುತ್ತಾನೆ. ಸರ್ಕಾರಿ ನೌಕರನ ಸಂಬಳದಿಂದ
    ಸಾಮಾನ್ಯ ಭವಿಷ್ಯ ನಿಧಿ ಃ 8005 – ರಾಜ್ಯ ಭವಿಷ್ಯ ನಿಧಿ
    ಕರ್ನಾಟಕ ಸರ್ಕಾರಿ ವಿಮಾ ಇಲಾಖೆಃ 8011 – ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು – 1 ವಿಮೆ ನಿಧಿಗಳು
14. ಸರ್ಕಾರಿ ಕಂಪನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ಪ್ರತಿನಿಯೋಜಿತನಾಗಿ ಮಾಸಿಕ 2500 ರೂಗಳಿಗೆ ಮೀರಿದ ಸಂಬಳವನ್ನು ಪಡೆಯುತ್ತಿರುವ ಸರ್ಕಾರಿ ನೌಕರನಿಗೆ ಉದ್ದಿಮೆಯು 1965ರ ಬೋನಸ್, ಸಂದಾಯ ಅಧಿನಿಯಮದ ಪ್ರಕಾರ ಬೋನಸ್ ಘೋಷಿಸಿದಲ್ಲಿ ಅಥವಾ 1965ರ ಬೋನಸ್ ಸಂದಾಯ ಅಧಿನಿಯಮದ ತತ್ವಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.
15. **ಪ್ರತಿ ನಿಯೋಜಕ ನೌಕರನಿಗೆ ಮುಂಬಡ್ತಿ** ಃ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯಗಳನ್ನು ಒದಗಿಸುವುದು. ಇವುಗಳನ್ನು ಈ ಇಲಾಖೆಯ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.
16. **ಗೃಹ ನಿರ್ಮಾಣ ಮುಂಗಡಃಗೃಹ ಖರೀದಿ ಮುಂಗಡಃಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡಃ** ಅನ್ಯ ನಿಯೋಜಕನು ಪ್ರಸ್ತುತ ಮುಂಗಡಗಳನ್ನು ಪ್ರತಿ ನಿಯೋಜಕ ನೌಕರನಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಪ್ರತಿ ನಿಯೋಜಕ ನೌಕರನು ಈ ಇಲಾಖೆಗೆ ಅರ್ಜಿ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಎಫ್‌ಡಿ 1 ಟಿಆರ್‌ಎಫ್‌ಸಿ 96 ದಿಃ 10–7–96 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

ಪಿ.ಆರ್. 666

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಹಿರೇಕೆರೂರ್ ತಾ. ಹಿಂದಿನ ಸಾತೇನಹಳ್ಳಿ ಪಂಚಾಯತ್ ಕಟ್ಟಡದ ಕೆಲಸ ನಿರ್ವಹಣೆಯಲ್ಲಿನ ಹಣ ದುರುಪಯೋಗಕ್ಕೆ ಕಾರಣರಾದ ನೌಕರರ ವಿರುದ್ಧ ವಿಚಾರಣೆ - ದಂಡನೆ ವಿಧಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂ: ಉಕಾ:83: ಗ್ರಾಪಂ:ಸಿಆರ್56:95-96, ದಿ: 25.3.97.
2. ಶ್ರೀ ಜಿ. ರಾಮಪ್ಪ, ಕಿರಿಯ ಇಂಜಿನಿಯರ್, ಶ್ರೀ ಎಸ್.ಎಸ್. ಕಮ್ಮಾರ, ಗ್ರಾಮ ಪಂಚಾಯತ್ ಕಾರ್ಯದರ್ಶಿ ಮತ್ತು ಶ್ರೀ ಪಿ.ಎಂ. ಪಾಟೀಲ್, ಆಡಳಿತಾಧಿಕಾರಿ ಇವರಿಗೆ ಆರೋಪಪಟ್ಟಿಯೊಂದಿಗೆ ಜಾರಿಗೊಳಿಸಿರುವ ದಿ: 10.1.97 ಮತ್ತು 1.8.97ರ ಕಾರಣ ಕೇಳುವ ನೋಟಿಸ್.
3. ಶ್ರೀ ಜಿ. ರಾಮಪ್ಪ, ಕಿಇಂ, ಶ್ರೀ ಎಸ್.ಎಸ್. ಕಮ್ಮಾರ, ಗ್ರಾ.ಪಂ.ಕಾ. ಮತ್ತು ಶ್ರೀ ಪಿ.ಎಂ. ಪಾಟೀಲ್, ಆಡಳಿತಾಧಿಕಾರಿ ಇವರ ದಿ: 3.9.97, 9.9.97, 8.9.97ರ ಲಿಖಿತ ಹೇಳಿಕೆಗಳು.
4. ಆದೇಶ ಸಂಖ್ಯೆ: ಗ್ರಾಅಪ 75 ಇಎನ್‌ಕ್ಯೂ 96 (ಭಾ-1 ಮತ್ತು 2) ದಿ: 10.11.97.
5. ವಿಚಾರಣಾಧಿಕಾರಿಗಳ ದಿ: 15.7.02ರ ವರದಿ.
6. 2ನೇ ಕಾರಣ ಕೇಳುವ ನೋಟಿಸ್ ಸಂ: ಗ್ರಾಅಪ 75 ಇಎನ್‌ಕ್ಯೂ 96 ದಿ: 15.9.02.
7. ಶ್ರೀ ಜಿ. ರಾಮಪ್ಪ, ಶ್ರೀ ಎಸ್.ಎಸ್. ಕಮ್ಮಾರ ಮತ್ತು ಶ್ರೀ ಪಿ.ಎಂ. ಪಾಟೀಲ್, ಇವರುಗಳ ದಿ: 28.12.02, 12.11.02 ಮತ್ತು 6.6.03 ರ ಲಿಖಿತ ಹೇಳಿಕೆಗಳು.
8. ಆದೇಶ ಸಂಖ್ಯೆ: ಗ್ರಾಅಪ 75 ಇಎನ್‌ಕ್ಯೂ 96 ದಿ: 16.12.03.
9. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂ: ಪಿಎಸ್‌ಸಿ 150 ಸಿಎನ್‌ಎಸ್ 03 ದಿ: 30.4.04.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಧಾರವಾಡ ಇವರು ಹಿರೇಕೆರೂರ್ ತಾ. ಹಿಂದಿನ ಸಾತೇನಹಳ್ಳಿ ಗ್ರಾಮ ಪಂಚಾಯತ್ ಕಟ್ಟಡದ ಕೆಲಸ ನಿರ್ವಹಣೆಯಲ್ಲಿನ ಹಣ ದುರುಪಯೋಗಕ್ಕೆ ಕಾರಣರೆನ್ನಲಾದ ಶ್ರೀ ಜಿ. ರಾಮಪ್ಪ, ಕಿರಿಯ ಇಂಜಿನಿಯರ್, ಶ್ರೀ ಎಸ್.ಎಸ್. ಕಮ್ಮಾರ, ಗ್ರಾಮ ಪಂಚಾಯತ್ ಕಾರ್ಯದರ್ಶಿ ಮತ್ತು ಶ್ರೀ ಪಿ.ಎಂ. ಪಾಟೀಲ್, ಆಡಳಿತಾಧಿಕಾರಿ ಇವರುಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸಲು ಪ್ರಸ್ತಾವನೆಯನ್ನು ಕರಡು ಆರೋಪಪಟ್ಟಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಶ್ರೀ ಜಿ. ರಾಮಪ್ಪ, ಕಿರಿಯ ಇಂಜಿನಿಯರ್, ಶ್ರೀ ಎಸ್.ಎಸ್. ಕಮ್ಮಾರ, ಗ್ರಾಮ ಪಂಚಾಯತ್ ಕಾರ್ಯದರ್ಶಿ ಮತ್ತು ಶ್ರೀ ಪಿ.ಎಂ. ಪಾಟೀಲ್, ಆಡಳಿತಾಧಿಕಾರಿ ಇವರುಗಳಿಗೆ ಕರ್ನಾಟಕ ಸರ್ಕಾರಿ ಸೇವಾ (ವನಿಮೇ) ನಿಯಮಗಳ 1957ರ ನಿಯಮ 11 ರನ್ವಯ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ, ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪಪಟ್ಟಿ ಜಾರಿಗೊಳಿಸಿತ್ತು. ಸರ್ಕಾರದಿಂದ ಜಾರಿಗೊಳಿಸಿದ್ದ ಕಾರಣ ಕೇಳುವ ನೋಟಿಸ್‌ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರಂತೆ ಆಪಾದಿತರು ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಸದರಿಯವರ ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ, ಅವುಗಳು ಸಮರ್ಪಕವಾಗಿಲ್ಲವೆಂದು ಮತ್ತು ಆಪಾದಿತ ನೌಕರರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಆಪಾದಿತರ ಮೇಲಿನ ಆರೋಪಗಳ ಬಗ್ಗೆ ಸತ್ಯಾಂಶವನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಆದೇಶದಲ್ಲಿ ಜಿಲ್ಲಾಧಿಕಾರಿ, ಧಾರವಾಡ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಉಪಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (5) ರಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು. ವಿಚಾರಣಾ ವರದಿಯಂತೆ ಆಪಾದಿತರ ಮೇಲಿನ ಕೆಲ ಆರೋಪಗಳು ರುಜುವಾತಾಗಿದ್ದವು.

ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಆಪಾದಿತರಿಗೆ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಿತ್ತು. ಸದರಿ 2ನೇ ಕಾರಣ ಕೇಳುವ ನೋಟಿಸ್‌ಗೆ ಆಪಾದಿತರು ಮೇಲೆ ಓದಲಾದ ಕ್ರಮ ಸಂಖ್ಯೆ (7) ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿದ್ದರು. ಆಪಾದಿತರ ಪೈಕಿ ಶ್ರೀ ಜಿ. ರಾಮಪ್ಪ ಇವರು 2ನೇ ಕಾರಣ ಕೇಳುವ ನೋಟೀಸ್‌ಗೆ ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದಾಗ ಅವುಗಳನ್ನು ಒಪ್ಪಲು ಯಾವುದೇ ಸಕಾರಣಗಳು ಇರುವುದಿಲ್ಲವಾದ್ದರಿಂದ ಅವರ ಮೇಲಿನ ಆರೋಪಗಳು ರುಜುವಾತಾಗುತ್ತವೆಂದು ನಿರ್ಣಯಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (8) ರ ಆದೇಶದಲ್ಲಿ ಶ್ರೀ ಜಿ. ರಾಮಪ್ಪ, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್ ಕಚೇರಿ, ಹಿರೇಕೆರೂರ್ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತವಾದ ರೂ. 14,287.00 (ಹದಿನಾಲ್ಕು ಸಾವಿರದ ಎರಡು ನೂರ ಎಂಭತ್ತೇಳು ರೂಪಾಯಿಗಳು ಮಾತ್ರ) ಗಳನ್ನು ಅವರ ವೇತನದಿಂದ ವಸೂಲು ಮಾಡಲು ಹಾಗೂ ಅವರು ಹಾಲಿ ವೇತನ ಪಡೆಯುತ್ತಿರುವ ಕಾಲಿಕ ವೇತನ ಶ್ರೇಣಿಯಲ್ಲಿ ಅವರ ವೇತನದ ಒಂದು ಹಂತವನ್ನು ಸಂಚಿತ ಪರಿಣಾಮ ಸಹಿತವಾಗಿ ಕೆಳಕ್ಕಿಳಿಸುವ ದಂಡನೆ ವಿಧಿಸಲಾಗಿದೆ.

ಪ್ರಕರಣದಲ್ಲಿನ ಇನ್ನುಳಿದ ಸೇವೆಯಿಂದ ನಿವೃತ್ತರಾಗಿದ್ದ ಆಪಾದಿತರಿಗೆ ದಂಡನೆ ವಿಧಿಸುವ ಮುನ್ನ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214 ರಂತೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆಯಬೇಕಾಗಿದ್ದರಿಂದ, ಆ ಬಗ್ಗೆ ಪ್ರತ್ಯೇಕವಾಗಿ ಕ್ರಮ ಜರುಗಿಸಲು ಸರ್ಕಾರವು ನಿರ್ಧರಿಸಿತ್ತು. ಆಪಾದಿತರಾದ ಶ್ರೀ ಎಸ್.ಎಸ್. ಕಮ್ಮಾರ ಮತ್ತು ಶ್ರೀ ಪಿ.ಎಂ. ಪಾಟೀಲ್ ಇವರ ಮೇಲಿನ ಆರೋಪಗಳು, ವಿಚಾರಣಾಧಿಕಾರಿಗಳ ವರದಿ ಈ ಕೆಳಕಂಡಂತಿವೆ.

**ಶ್ರೀ ಎಸ್.ಎಸ್. ಕಮ್ಮಾರ, ಗ್ರಾಮ ಪಂಚಾಯತ್ ಕಾರ್ಯದರ್ಶಿ ಇವರ ಮೇಲಿನ ಆರೋಪಗಳು**

**ಆರೋಪ 1:-**

ಗ್ರಾಮ ಪಂಚಾಯತ್ ಕಟ್ಟಡ ಕೆಲಸಕ್ಕೆ 47,884.00 ರೂ.ಗಳ ಸಿಮೆಂಟ್ ಕಬ್ಬಿಣ ಇತ್ಯಾದಿಗಳನ್ನು ಖರೀದಿಸಿ ಅವುಗಳ ಬಳಕೆ ಬಗ್ಗೆ ಅಳತೆ ಪುಸ್ತಕದಲ್ಲಿ ನಮೂದಿಸದೆ ಹಣ ದುರುಪಯೋಗಪಡಿಸಿಕೊಂಡಿರುವುದು.

**ವಿಚಾರಣಾಧಿಕಾರಿಗಳ ವರದಿ:**

ಕಿರಿಯ ಇಂಜಿನಿಯರ್‌ರು ಅಳತೆ ಪುಸ್ತಕದಲ್ಲಿ ನಮೂದಿಸಿ ಸಾಮಗ್ರಿಗಳಿಗೆ ಹಣ ಪಾವತಿಸಬೇಕಾಗಿದ್ದು, ಈ ಜವಾಬ್ದಾರಿಯನ್ನು ಅವರು ಸಮರ್ಪಕವಾಗಿ ನಿರ್ವಹಿಸಿಲ್ಲ. ಮತ್ತು ಆಪಾದಿತರು ಜೆ.ಆರ್.ವೈ. ಮಾರ್ಗಸೂಚಿಗಳನ್ನು ಪಾಲಿಸಿಲ್ಲವೆಂಬುದು ಖಚಿತಪಡುತ್ತದೆ. ಆದ್ದರಿಂದ, ಈ ಆಪಾದನೆ ಸಾಬೀತಾಗುತ್ತದೆಂದು ವರದಿ ಮಾಡಿದ್ದಾರೆ.

**ಆರೋಪ 2:-**

ಕಿರಿಯ ಇಂಜಿನಿಯರ್‌ರಿಗೆ ಸಾಮಗ್ರಿ ಖರೀದಿಗಾಗಿ 30,000.00 ಗಳ ಮುಂಗಡ ನೀಡಿದ್ದು, ಅದಕ್ಕೆ ರಶೀದಿ ಪಡೆಯದೆ ಸದರಿ ಹಣ ದುರುಪಯೋಗವಾಗಲು ಕಾರಣರಾಗಿರುವುದು.

**ವಿಚಾರಣಾಧಿಕಾರಿಗಳ ವರದಿ:**

ಕಾರ್ಯದರ್ಶಿಯವರು ಮುಂಗಡ ಹಣವನ್ನು ನಿಯಮಾನುಸಾರ ಚೆಕ್ ಮೂಲಕ ಕಿರಿಯ ಇಂಜಿನಿಯರ್‌ರ ಹೆಸರಿನಲ್ಲಿ ಪಾವತಿಸಿರುವುದಿಲ್ಲ. ಕಿರಿಯ ಇಂಜಿನಿಯರ್‌ರು ತಾವು ಸದರಿ ಮೊತ್ತವನ್ನು ಪಡೆದಿಲ್ಲವೆಂದು, ಆದರೆ ಆಪಾದಿತರು ತಾವು ಹಣ ನೀಡಿರುವುದಾಗಿ ತಿಳಿಸಿರುತ್ತಾರೆ. ಈ ಬಗ್ಗೆ ದಾಖಲಾತಿಗಳು ಇರುವುದಿಲ್ಲ. ವಿಚಾರಣೆಯಲ್ಲಿ ನಿಜಾಂಶ ಏನೆಂಬುದು ತಿಳಿದು ಬರುತ್ತಿಲ್ಲ. ಆಪಾದನೆ ಭಾಗಶಃ ಸಾಬೀತಾಗುತ್ತದೆಂದು ವರದಿ ಮಾಡಿದ್ದಾರೆ.

**ಆರೋಪ 3:-**

ಗ್ರಾಮ ಪಂಚಾಯತ್ ಕಟ್ಟಡದ ಕೆಲಸ ನಿರ್ವಹಿಸಿದ ಕೂಲಿಕಾರರಿಗೆ 12,859.00 ರೂ.ಗಳ ಮೊತ್ತದ ಆಹಾರ ಧಾನ್ಯಗಳನ್ನು ಖರ್ಚು ಹಾಕಿದ್ದು, ಹಣ ದುರುಪಯೋಗಕ್ಕೆ ಕಾರಣರಾಗಿರುವುದು.

**ವಿಚಾರಣಾಧಿಕಾರಿಗಳ ವರದಿ:**

ಕೂಲಿಕಾರರಿಗೆ ಸಂಬಂಧಪಟ್ಟಂತೆ ಎನ್.ಎಂ.ಆರ್. ಗಳನ್ನು ನಿರ್ವಹಿಸಿ, ಕೂಲಿ ಹಣವನ್ನು ಅದರ ಭಾಗವಾಗಿ ನೀಡಲ್ಪಡುವ ಆಹಾರ ಧಾನ್ಯಗಳನ್ನು ವಿತರಿಸಬೇಕಾಗಿದ್ದು, ನಿಯಮಗಳನ್ನು ಉಲ್ಲಂಘಿಸಿದ್ದಾರೆ. ಆದರೆ ಕಾರ್ಯದರ್ಶಿಯವರು ಆಹಾರಧಾನ್ಯಗಳನ್ನು ಕಿರಿಯ

ಇಂಜಿನಿಯರ್‌ರ ಕೋರಿಕೆಯಂತೆ ಶ್ರೀ ಯು.ಬಿ. ತಡಕನಹಳ್ಳಿ ಇವರಿಗೆ ಒಪ್ಪಿಸಿರುವುದು ದಾಖಲೆಗಳಿಂದ ತಿಳಿದುಬಂದಿರುವುದರಿಂದ ಈ ಆಪಾದನೆ ರುಜುವಾತಾಗುವುದಿಲ್ಲವೆಂದು ವರದಿ ಮಾಡಿದ್ದಾರೆ.

**ಆರೋಪ 4:-**

ಗ್ರಾಮ ಪಂಚಾಯತ್ ಕಟ್ಟಡದ ಕಾಮಗಾರಿಗೆ ತಾಂತ್ರಿಕ ಮಂಜೂರಾತಿ ಪಡೆಯದೆ ಮಾಡಲಾದ ಕೆಲಸಕ್ಕಿಂತ ಹೆಚ್ಚುವರಿ ಹಣ ಪಾವತಿಸಿರುವುದು.

**ವಿಚಾರಣಾಧಿಕಾರಿಗಳ ವರದಿ:**

ಆಡಳಿತ ಮತ್ತು ತಾಂತ್ರಿಕ ಮಂಜೂರಾತಿ ಪಡೆದಿಲ್ಲವೆಂಬುದು ಸ್ಥಿರಪಟ್ಟಿದ್ದರೂ ಅಂದಾಜಿಗಿಂತ ಹೆಚ್ಚಿಗೆ ವೆಚ್ಚ ಮಾಡಿದ್ದಾರೆ ಎಂಬ ಆಪಾದನೆ ಸಿದ್ದವಾಗುವುದಿಲ್ಲ. ಆದರೆ ಖರ್ಚಿಗೆ ಅನುಗುಣವಾಗಿ ಕೆಲಸ ಆಗಿಲ್ಲ. ಕೆಲಸ ಅಪೂರ್ಣಗೊಂಡಿದೆ, ಆಪಾದಿಸಲಾದಂತೆ ಆಪಾದನೆ ರುಜುವಾತಾಗುವುದಿಲ್ಲವೆಂದು ವರದಿ ಮಾಡಿದ್ದಾರೆ.

**ಶ್ರೀ ಪಿ.ಎಂ. ಪಾಟೀಲ್, ಆಡಳಿತಾಧಿಕಾರಿ, ಇವರ ಮೇಲಿನ ಆಪಾದನೆಗಳು:**

**ಆರೋಪ 1:-**

ಗ್ರಾಮ ಪಂಚಾಯತ್ ಕಟ್ಟಡ ಕೆಲಸಕ್ಕೆ 47,884.00 ರೂ.ಗಳ ಸಿಮೆಂಟ್ ಕಬ್ಬಿಣ ಇತ್ಯಾದಿಗಳನ್ನು ಖರೀದಿಸಿದ್ದು, ಕಟ್ಟಡ ಕೆಲಸಗಳಿಗೆ ಉಪಯೋಗಿಸಿದ ಅಳತೆ ಪುಸ್ತಕದಲ್ಲಿ ಸಂಬಂಧಿಸಿದ ಕಿರಿಯ ಇಂಜಿನಿಯರ್‌ರು ನಮೂದಿಸದೆ ಹಣ ದುರುಪಯೋಗಕ್ಕೆ ಕಾರಣರಾಗಿರುವುದು.

**ವಿಚಾರಣಾಧಿಕಾರಿಗಳ ವರದಿ:**

ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ಸಹ ಹಣ ಪಾವತಿಸುವ ಪೂರ್ವದಲ್ಲಿ ಸಾಮಗ್ರಿಗಳನ್ನು ಸ್ಟಾಕ್ ತೆಗೆದುಕೊಂಡ ಬಗ್ಗೆ ಸಂಬಂಧಪಟ್ಟ ಕಿರಿಯ ಇಂಜಿನಿಯರ್‌ಗೆ ತೋರಿಸಿ ಪ್ರಮಾಣ ಪತ್ರವನ್ನು ಅಳತೆ ಪುಸ್ತಕದಲ್ಲಿ ನಮೂದಿಸಿ ತರುವಾಯ ಹಣ ಪಾವತಿಸಲು ವಿಫಲರಾಗಿದ್ದಾರೆಂದು ವಿಚಾರಣೆಯಿಂದ ಸ್ಪಷ್ಟವಾಗಿದೆ. ಕಾರ್ಯದರ್ಶಿಯವರು ಈ ವಿವರವನ್ನು ತಮ್ಮ ಮೇಲಾಧಿಕಾರಿಗಳಿಗೆ ತಿಳಿಸಿ, ಹಣ ಪಾವತಿ ಮಾಡುವ ಬಗ್ಗೆ ಅವರ ಅನುಮತಿ ಪಡೆದಿರುವುದು ಕಂಡು ಬರುತ್ತಿಲ್ಲ ಮತ್ತು ಜೆ.ಆರ್.ವೈ. ಮಾರ್ಗಸೂಚಿಗಳ ಪ್ರಕಾರ ಪಾವತಿಸುವ ಪ್ರತಿಯೊಂದು ಮೊತ್ತಕ್ಕೆ ಸಂಬಂಧಿಸಿದಂತೆ ಮುಂದಿನ ಗ್ರಾಮ ಪಂಚಾಯಿತಿ ಮತ್ತು ಗ್ರಾಮ ಸಭೆಗಳಲ್ಲಿ ವಿವರ ಮಂಡಿಸಿ, ಅನುಮೋದನೆ ಪಡೆಯಬೇಕೆಂದಿದೆ. ಸದರಿ ಅಂಶಗಳ ಪರಿಶೀಲನೆಯಿಂದ ಆಪಾದಿತ ನೌಕರರು ಮಾರ್ಗಸೂಚಿಗಳನ್ನು ಉಲ್ಲಂಘಿಸಿ ಕರ್ತವ್ಯಚ್ಯುತಿ ಎಸಗಿದ್ದಾರಲ್ಲದೆ ಖರೀದಿಸಲ್ಪಟ್ಟ ಸಾಮಗ್ರಿಗಳಿಗೆ ಸಂಬಂಧಿಸಿದಂತೆ ಸ್ಟಾಕ್ ವಹಿ ನಿರ್ವಹಿಸದೆ, ಅಳತೆ ಪುಸ್ತಕದಲ್ಲಿ ಸಾಮಗ್ರಿಗಳ ವಿವರ ಮತ್ತು ಪ್ರಮಾಣವನ್ನು ನಮೂದಿಸದೆ ಹಣ ಪಾವತಿ ಮಾಡಿದ್ದು ದುರುಪಯೋಗಕ್ಕೆ ಕಾರಣರಾಗಿದ್ದು, ಯಾವುದೇ ಸಾಮಗ್ರಿಗಳನ್ನು ಸ್ಟಾಕ್ ರಿಜಿಸ್ಟರ್‌ಗೆ ತೆಗೆದುಕೊಂಡು ಅಳತೆ ಪುಸ್ತಕದಲ್ಲಿ ನಮೂದಿಸಿಕೊಂಡು ಆಡಳಿತಾಧಿಕಾರಿಗಳ ಅನುಮೋದನೆ ಪಡೆಯುವುದು ಕಾರ್ಯದರ್ಶಿಯವರ ಜವಾಬ್ದಾರಿಯಾಗಿರುತ್ತದೆ. ಈ ಜವಾಬ್ದಾರಿಯಲ್ಲಿ ಕಾರ್ಯದರ್ಶಿಯವರು ವಿಫಲರಾಗಿರುತ್ತಾರೆ. ಕಾರ್ಯದರ್ಶಿಯವರ ಈ ವಿಫಲತೆಯನ್ನು ಗಮನಿಸಿದಲ್ಲಿ ಆಡಳಿತಾಧಿಕಾರಿಗಳು ವಿಫಲರಾಗಿದ್ದಾರೆ. ಆದ್ದರಿಂದ, ಇವರ ಮೇಲಿನ ಈ ಆಪಾದನೆ ಭಾಗಶಃ ರುಜುವಾತಾಗುತ್ತದೆಂದು ವರದಿ ಮಾಡಿದ್ದಾರೆ.

**ಆರೋಪ 2:-**

ಕಿರಿಯ ಇಂಜಿನಿಯರ್‌ರಿಗೆ ಸಾಮಗ್ರಿ ಖರೀದಿಗಾಗಿ 30,000.00 ಗಳ ಮುಂಗಡ ನೀಡಿ, ಆ ಹಣಕ್ಕೆ ರಶೀದಿ ಪಡೆಯದೆ ಹಣ ದುರುಪಯೋಗವಾಗುವುದಕ್ಕೆ ಕಾರಣರಾಗಿರುವುದು.

**ವಿಚಾರಣಾಧಿಕಾರಿಗಳ ವರದಿ:**

ಹಣ ಕೊಟ್ಟ ಅಥವಾ ತೆಗೆದುಕೊಂಡ ಬಗ್ಗೆ ಯಾವುದೇ ದಾಖಲಾತಿಗಳು ಇರುವುದಿಲ್ಲ. ಇದರಿಂದಾಗಿ, ಇಲಾಖಾ ವಿಚಾರಣೆಯಲ್ಲಿ ಈ ವಿಷಯವಾಗಿ ನಿಜಾಂಶ ಏನೆಂಬುದು ತಿಳಿದು ಬರುತ್ತಿಲ್ಲ. ಆದರೆ, ಆಡಳಿತಾಧಿಕಾರಿಗಳು ಮಾತ್ರ ಮುಂಗಡ ಹಣವನ್ನು ನಿಯಮಾನುಸಾರ ಚೆಕ್ ಮೂಲಕ ಕಿರಿಯ ಇಂಜಿನಿಯರ್‌ರ ಹೆಸರಿನಲ್ಲಿ ಪಾವತಿಸಿರುವುದಿಲ್ಲ. ಇದರಿಂದಾಗಿ ಈ ಆಪಾದನೆ ಭಾಗಶಃ ಸಾಬೀತಾಗುತ್ತದೆಂದು ವರದಿ ಮಾಡಿದ್ದಾರೆ.

**ಆರೋಪ 3:-**

ಗ್ರಾಮ ಪಂಚಾಯತ್ ಕಟ್ಟಡದ ಕೆಲಸ ನಿರ್ವಹಿಸಿದ ಕೂಲಿಕಾರರಿಗೆ 12,859.10 ರೂ.ಗಳ ಆಹಾರ ಧಾನ್ಯಗಳನ್ನು ಖರ್ಚಾಗಿದ್ದು, ಅದಕ್ಕೆ ಸಂಬಂಧಪಟ್ಟಂತೆ ಎನ್.ಎಂ.ಆರ್. ಗಳನ್ನು ಇಡದೆ ದುರುಪಯೋಗಕ್ಕೆ ಕಾರಣರಾಗಿರುವುದು.

**ವಿಚಾರಣಾಧಿಕಾರಿಗಳ ವರದಿ:**

ಜೆ.ಆರ್.ವೈ. ಮಾರ್ಗಸೂಚಿಗಳ ಪ್ರಕಾರ ಕೂಲಿಗಾರರಿಗೆ ಹಣ ಪಾವತಿ ಜವಾಬ್ದಾರಿ ಗ್ರಾಮ ಪಂಚಾಯಿತಿಯಾದಾಗಿದ್ದು, ಅದನ್ನು ಕಿರಿಯ ಇಂಜಿನಿಯರ್‌ರ ಕೋರಿಕೆಯಂತೆ ಶ್ರೀ ಯು.ಬಿ. ತಡಕನಹಳ್ಳಿ ಇವರಿಗೆ ನೀಡಿದ್ದು, ಅವರು ಸ್ವೀಕರಿಸಿದ ಬಗ್ಗೆ ದಾಖಲೆ ಸಹ ಹಾಜರುಪಡಿಸಿದ್ದಾರೆ. ಮಾರ್ಗಸೂಚಿಗಳನ್ವಯ ವಿಚಾರಣಾಧಿಕಾರಿಗಳು ಕೂಲಿಕಾರರಿಗೆ ಸಂಬಂಧಿಸಿದಂತೆ ಎನ್.ಎಂ.ಆರ್. ಗಳನ್ನು ನಿರ್ವಹಿಸಬೇಕಾಗುತ್ತದೆ ಮತ್ತು ಆಹಾರ ಧಾನ್ಯಗಳನ್ನು ವಿತರಿಸಬೇಕಾಗುತ್ತದೆ. ಕಿರಿಯ ಇಂಜಿನಿಯರ್‌ರು ಸಂಬಂಧಿಸಿದ ಅಳತೆ ಪುಸ್ತಕದಲ್ಲಿ ಅಳತೆ ನಮೂದಿಸಿ ಪಾವತಿಸಬೇಕಾದ ಕೂಲಿ ಹಣವನ್ನು ಲೆಕ್ಕ ಮಾಡಿ ಕೊಡಬೇಕಾಗುತ್ತದೆ. ಇದರಿಂದಾಗಿ, ಸದರಿ ಸಿಬ್ಬಂದಿಗಳು ನಿಯಮಗಳನ್ನು ಉಲ್ಲಂಘಿಸಿರುವುದು ಕಂಡು ಬರುತ್ತದೆ. ಆಡಳಿತಾಧಿಕಾರಿಗಳು ಕಿರಿಯ ಇಂಜಿನಿಯರ್‌ರ ಕೋರಿಕೆಯಂತೆ ಶ್ರೀ ಯು.ಬಿ. ತಡಕನಹಳ್ಳಿ ಇವರಿಗೆ ಆಹಾರ ಧಾನ್ಯವನ್ನು ನೀಡಿ ಸ್ವೀಕೃತಿ ಪಡೆದಿರುವುದು ದಾಖಲೆಗಳಿಂದ ತಿಳಿದು ಬರುವುದರಿಂದ ಈ ಆಪಾದನೆ ರುಜುವಾತಾಗುವುದಿಲ್ಲ ಎಂದಿದ್ದಾರೆ. ಆದರೆ, ಆಹಾರಧಾನ್ಯಗಳನ್ನು ಕೂಲಿಕಾರರಿಗೆ ವಿತರಿಸುವುದು ಕಾರ್ಯದರ್ಶಿ, ಆಡಳಿತಾಧಿಕಾರಿ ಹಾಗೂ

ಕಿರಿಯ ಇಂಜಿನಿಯರ್ ರ ಸಂಯುಕ್ತ ಜವಾಬ್ದಾರಿ ಎಂದು ಇವರು ಈ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಿಲ್ಲ ಎಂದು ವರದಿ ಮಾಡಿದ್ದಾರೆ.

**ಆರೋಪ 4:-**

ಗ್ರಾಮ ಪಂಚಾಯತ್ ಕಟ್ಟಡದ ಕಾಮಗಾರಿಗೆ ಅಂದಾಜು ಪಟ್ಟಿ ತಯಾರಿಸಿದ್ದು, ತಾಂತ್ರಿಕ ಮಂಜೂರಾತಿ ಪಡೆಯದೆ ಇರುವುದು ಅಲ್ಲದೆ ಕಟ್ಟಡದ ಕೆಲಸ ಆಗಿದ್ದಕ್ಕಿಂತ ಹೆಚ್ಚುವರಿ ಹಣ ಪಾವತಿ ಮಾಡಿ ಸರ್ಕಾರಿ ಹಣ ದುರುಪಯೋಗಕ್ಕೆ ಕಾರಣರಾಗಿರುವರೆಂಬ ಬಗ್ಗೆ.

**ವಿಚಾರಣಾಧಿಕಾರಿಗಳ ವರದಿ:**

ಕಿರಿಯ ಇಂಜಿನಿಯರ್‌ರು 1,55,000.00 ರೂ.ಗಳ ಅಂದಾಜು ಪತ್ರ ತಯಾರಿಸಿ ಕೊಟ್ಟಿದ್ದಾರೆ. ಗ್ರಾಮ ಪಂಚಾಯಿತಿ ಅಥವಾ ಗ್ರಾಮ ಸಭೆಗಳಲ್ಲಿ ಈ ಅಂದಾಜು ಪಟ್ಟಿ ಮಂಡಿಸಿ, ಆಡಳಿತಾತ್ಮಕ ಮಂಜೂರು ಪಡೆದು ನಂತರ ತಾಂತ್ರಿಕ ಮಂಜೂರಾತಿ ಪಡೆಯುವುದು ಆಡಳಿತಾಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ. ಈ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಅವರು ವಿಫಲರಾಗಿದ್ದಾರೆಂದು ವಿಚಾರಣೆಯಿಂದ ತಿಳಿದು ಬರುತ್ತದೆ. ಕಾರ್ಯದರ್ಶಿಯವರು ಅಂದಾಜಿಗಿಂತ ಹೆಚ್ಚಿಗೆ ಖರ್ಚು ಮಾಡಿದ್ದಾರೆಂಬುದು ನಿಜವಲ್ಲ. ಆದರೆ, ಸದರಿ ಕಾಮಗಾರಿಯನ್ನು ಅಪೂರ್ಣವಾಗಿದೆ ಎಂದು ಹೇಳಬೇಕಾಗುತ್ತದೆ. ಹಣ ಯಾರಿಂದ ದುರುಪಯೋಗವಾಗಿದೆ, ಯಾವ ಹಂತದಲ್ಲಿ ದುರುಪಯೋಗವಾಗಿದೆ ಎಂದು ನಿರ್ಣಯಿಸುವುದು ಕಷ್ಟಸಾಧ್ಯ. ಆದರೆ ಆಡಳಿತಾಧಿಕಾರಿಗಳು ಜೆ.ಆರ್.ವೈ. ಮಾರ್ಗಸೂಚಿಗಳನ್ನು ಅನುಸರಿಸಿಲ್ಲ ಎಂಬುದು ಮಾತ್ರ ಸ್ಪಷ್ಟವಾಗುತ್ತದೆ. ಅವರು ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿ ಪಡೆದಿಲ್ಲವೆಂಬುದು ಸ್ಥಿರಪಟ್ಟಿದ್ದರೂ ಅಂದಾಜಿಗಿಂತ ಹೆಚ್ಚಿಗೆ ವೆಚ್ಚ ಮಾಡಿದ್ದಾರೆ ಎಂಬ ಆಪಾದನೆ ರುಜುವಾತಾಗುವುದಿಲ್ಲ.

ವಿವರವಾದ ವಿಚಾರಣೆಯಲ್ಲಿ ಆಪಾದಿತರ ಮೇಲೆ ಸಾಬೀತಾದ ಆರೋಪಗಳ ಬಗ್ಗೆ ಜಾರಿಗೊಳಿಸಿದ್ದ 2ನೇ ಕಾರಣ ಕೇಳುವ ನೋಟಿಸ್‌ಗೆ ಆಪಾದಿತರಾದ ಶ್ರೀ ಎಸ್.ಎಸ್. ಕಮ್ಮಾರ ಮತ್ತು ಶ್ರೀ ಪಿ.ಎಂ. ಪಾಟೀಲ್ ಇವರುಗಳು ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ದಿ: 12.11.02 ಮತ್ತು 6.6.03 ರಂದು ಸಲ್ಲಿಸಿರುವ ಲಿಖಿತ ಹೇಳಿಕೆಗಳಲ್ಲಿ ತಮ್ಮನ್ನು ಆಪಾದನೆಗಳಿಂದ ದೋಷಮುಕ್ತರನ್ನಾಗಿಸುವಂತೆ ಕೋರಿದ್ದರೂ ಸಹ ಆ ಬಗ್ಗೆ ಅವರು ಯಾವುದೇ ದಾಖಲಾತಿಗಳನ್ನು ಒದಗಿಸಿರುವುದಿಲ್ಲ. ಆದ್ದರಿಂದ ಸರ್ಕಾರವು ವಿಚಾರಣಾ ವರದಿಯಂತೆ ಆಪಾದಿತರ ಮೇಲಿನ ಸಾಬೀತಾದ ಆರೋಪಗಳಿಗೆ ಅನುಗುಣವಾಗಿ ದಂಡನೆ ವಿಧಿಸಲು ನಿರ್ಧರಿಸಿ, ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಿತ್ತು. ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಓದಲಾದ ಕ್ರಮ ಸಂಖ್ಯೆ (9) ರಲ್ಲಿ ದಂಡನೆ ವಿಧಿಸುವ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 75 ಇಎನ್‌ಕ್ಯೂ 96, ಬೆಂಗಳೂರು, ದಿನಾಂಕ: 15ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಹಿರೇಕೆರೂರ್ ತಾ. ಹಿಂದಿನ ಸಾತೇನಹಳ್ಳಿ ಗ್ರಾಮ ಪಂಚಾಯತ್ ಕಟ್ಟಡದ ಕೆಲಸ ನಿರ್ವಹಣೆಯಲ್ಲಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿರುವರೆಂಬ ಆರೋಪಗಳಿಗೆ ಸಂಬಂಧಿಸಿದಂತೆ ಸಾಬೀತಾದ ಆರ್ಥಿಕ ನಷ್ಟ ಮತ್ತು ಕರ್ತವ್ಯಲೋಪದ ಆಪಾದನೆಗಳಿಗಾಗಿ ಶ್ರೀ ಎಸ್.ಎಸ್. ಕಮ್ಮಾರ, ಅಂದಿನ ಗ್ರಾಮ ಪಂಚಾಯತ್ ಕಾರ್ಯದರ್ಶಿ (ಪ್ರಸ್ತುತ ನಿವೃತ್ತ) ಮತ್ತು ಶ್ರೀ ಪಿ.ಎಂ. ಪಾಟೀಲ್, ಅಂದಿನ ಆಡಳಿತಾಧಿಕಾರಿ (ಪ್ರಸ್ತುತ ನಿವೃತ್ತ), ತಾಲ್ಲೂಕು ಪಂಚಾಯತ್ ಕಛೇರಿ, ಹಿರೇಕೆರೂರ್ ಇವರಿಗೆ ಈ ಕೆಳಕಂಡಂತೆ ದಂಡನೆ ವಿಧಿಸಿ, ಸರ್ಕಾರವು ಆದೇಶಿಸಿದೆ.

1. ಶ್ರೀ ಎಸ್.ಎಸ್. ಕಮ್ಮಾರ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತ ರೂ. 53,094.00 (ಐವತ್ತ ಮೂರು ಸಾವಿರದ ತೊಂಭತ್ತ ನಾಲ್ಕು ರೂಪಾಯಿಗಳು ಮಾತ್ರ) ಗಳನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮ 214 ರನ್ವಯ ಅವರ ಡಿ.ಸಿ.ಆರ್.ಜಿ ಯಿಂದ ವಸೂಲು ಮಾಡುವುದು ಮತ್ತು ಅವರು ಎಸಗಿರುವ ಕರ್ತವ್ಯಲೋಪಕ್ಕೆ ಸಂಬಂಧಿಸಿದಂತೆ ಅವರ ನಿವೃತ್ತಿ ವೇತನದಿಂದ ಶೇಕಡ 5 ರಷ್ಟನ್ನು ಸಂಚಿತ ಪರಿಣಾಮವಾಗಿ ಶಾಶ್ವತವಾಗಿ ತಡೆಹಿಡಿಯುವುದು.
2. ಶ್ರೀ ಪಿ.ಎಂ. ಪಾಟೀಲ್ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟದ ಮೊತ್ತ ರೂ. 23,864.00 (ಇಪ್ಪತ್ತಮೂರು ಸಾವಿರದ ಎಂಟು ನೂರ ಅರವತ್ತ ನಾಲ್ಕು ರೂಪಾಯಿಗಳು ಮಾತ್ರ) ಗಳನ್ನು ಕೆ.ಸಿ.ಎಸ್.ಆರ್. ನಿಯಮ 214 ರನ್ವಯ ಅವರ ಡಿ.ಸಿ.ಆರ್.ಜಿ. ಯಿಂದ ವಸೂಲು ಮಾಡುವುದು ಮತ್ತು ಅವರು ಎಸಗಿರುವ ಕರ್ತವ್ಯಲೋಪಕ್ಕೆ ಸಂಬಂಧಿಸಿದಂತೆ ಅವರ ನಿವೃತ್ತಿ ವೇತನದಿಂದ ಶೇಕಡ 5 ರಷ್ಟನ್ನು ಸಂಚಿತ ಪರಿಣಾಮವಾಗಿ ಶಾಶ್ವತವಾಗಿ ತಡೆಹಿಡಿಯುವುದು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಧಾರವಾಡ ಇವರು ಸದರಿ ದಂಡನಾ ಆದೇಶವನ್ನು ಜಾರಿಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 668

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** 2004-05ನೇ ಸಾಲಿಗೆ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವನ್ನು ಮುಂದುವರಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿಪಿ 6 ಆರ್‌ಇ ಸಿ 94 ದಿ: 16.04.94
2. ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿಪಿ 17 ಆರ್‌ಇ ಸಿ 91 ದಿ: 06.08.96
3. ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿಪಿ 1 ಆರ್‌ಇ ಸಿ 96 ದಿ:23.05.96
4. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 37 ಗ್ರಾಇಂಕಾ 96 ದಿ: 07.11.96

5. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 3 ಗ್ರಾಇ ಂಕಾ 97 ದಿ: 03.06.97
6. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 2 ಗ್ರಾಇ ಂಕಾ 98 ದಿ: 30.04.98
7. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 19 ಗ್ರಾಇ ಂಕಾ 99 ದಿ: 26.05.99
8. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 338 ಪಬವ 96 ದಿ: 17.06.99
9. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 6(2) ಗ್ರಾಇ ಂಕಾ 2000 ದಿ: 06.06.2000
10. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 6(1) ಗ್ರಾಇ ಂಕಾ 2000 ದಿ: 06.06.2000
11. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 46 ಗ್ರಾಇ ಂಕಾ 99 ದಿ: 12.03.2001
12. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 8 ಗ್ರಾಇ ಂಕಾ 2001 ದಿ: 26.06.2001
13. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 10 ಗ್ರಾಇ ಂಕಾ 2002 ದಿ: 05.06.2002
14. ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 4 ಗ್ರಾಇ ಂಕಾ 2001 ದಿ: 07.04.2002 .
15. ಸರ್ಕಾರಿ ಆದೇಶ ಸಂಖ್ಯೆ :ಗ್ರಾಅಪ 9 ಗ್ರಾಇ ಂಕಾ 2003, ದಿನಾಂಕ 02.06.2003

**ಪ್ರಸ್ತಾವನೆ :**

ಉಲ್ಲೇಖ(15)ರ ಸರ್ಕಾರಿ ಆದೇಶದಲ್ಲಿ ಸಮಗ್ರ ಗ್ರಾಮೀಣ ಇ ಂಧನ ಕಾರ್ಯಕ್ರಮವನ್ನು 2003-04ನೇ ಸಾಲಿಗೆ ಮುಂದುವರಿಸಲು ಅನುಮೋದನೆ ನೀಡಲಾಗಿತ್ತು. 2004-05ನೇ ಸಾಲಿನ ರಾಜ್ಯ ಆಯವ್ಯಯದಡಿ ರೂ.185.00 ಲಕ್ಷಗಳನ್ನು ಒದಗಿಸಿದ್ದು, ಕೇಂದ್ರವು ರಾಜ್ಯದ 27 ಜಿಲ್ಲೆಗಳಿಗೆ ತಲಾ ರೂ.10.00 ಲಕ್ಷಗಳನ್ನು ಒದಗಿಸುತ್ತದೆ. ಆದ್ದರಿಂದ 27 ಜಿಲ್ಲೆಗಳಿಗೆ ಕಾರ್ಯಕ್ರಮವನ್ನು ಮುಂದುವರಿಸುವ ಅಗತ್ಯವಿದೆ. ರಾಜ್ಯದಲ್ಲಿನ ವಿದ್ಯುತ್ ಕೊರತೆಯನ್ನು ನಿವಾರಿಸಲು, ಪರಿಸರ ಸಂರಕ್ಷಣೆ, ಅರಣ್ಯನಾಶ, ವಾಯು ಮಾಲಿನ್ಯತೆಯನ್ನು ತಡೆಗಟ್ಟಲು ಸಮಗ್ರ ಗ್ರಾಮೀಣ ಇ ಂಧನ ಕಾರ್ಯಕ್ರಮವು ಪೂರಕವಾಗಿರುವುದರಿಂದ 2004-05ನೇ ಸಾಲಿಗೆ ಮುಂದುವರಿಸುವುದು ಅತ್ಯಗತ್ಯವಾಗಿರುತ್ತದೆ. ಈ ಪ್ರಯುಕ್ತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಗ್ರಾಅಪ 18 ಗ್ರಾಇ ಂಕಾ 2004, ಬೆಂಗಳೂರು, ದಿನಾಂಕ 17ನೇ ಜೂನ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಸಮಗ್ರ ಗ್ರಾಮೀಣ ಇ ಂಧನ ಕಾರ್ಯಕ್ರಮವನ್ನು ರಾಜ್ಯದ 27 ಜಿಲ್ಲೆಗಳಲ್ಲೂ ಮುಂದುವರಿಸಿದೆ.

2004-05ನೇ ಸಾಲಿನಲ್ಲಿ ಸಮಗ್ರ ಗ್ರಾಮೀಣ ಇ ಂಧನ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ವೆಚ್ಚವನ್ನು ಆಯವ್ಯಯದಲ್ಲಿ ಒದಗಿಸಲಾದ ಈ ಕೆಳಗೆ ತೋರಿಸಿದ ಲೆಕ್ಕ ಶೀರ್ಷಿಕೆಗಳಡಿ ಭರಿಸತಕ್ಕದ್ದು.

2501 - ಗ್ರಾಮೀಣ ಅಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು
04 - ಸಮಗ್ರ ಗ್ರಾಮೀಣ ಇ ಂಧನ ಯೋಜನಾ ಕಾರ್ಯಕ್ರಮ
105 - ಯೋಜನಾ ಅನುಷ್ಠಾನ
197 - ಸ್ಥಳೀಯ ಸಂಸ್ಥೆ ಕಾರ್ಪೋರೇಷನ್ ಮುಂತಾದವುಗಳಿಗೆ ಸಹಾಯ
-0-01 - ಯೋಜನಾ ಅನುಷ್ಠಾನ ( ಸಿಬ್ಬಂದಿ ವೆಚ್ಚ)
-1-01 - ಜಿಲ್ಲಾ ಪಂಚಾಯತ್ ಮತ್ತು ಗ್ರಾಮ ಪಂಚಾಯತ್‌ಗಳು - ಬ್ಲಾಕು ಅನುದಾನ

| | | |
|---|---|---|
| 2501-04-105-0-01 | ರೂ.54.24 ಲಕ್ಷಗಳು | (ಯೋಜನಾ ಅನುಷ್ಠಾನ) ಅನುಬಂಧ-Iಅ ದಲ್ಲಿ ತೋರಿಸಿದ ಸಿಬ್ಬಂದಿ ವೆಚ್ಚಗಳು |
| 2501-04-197-1-01 | ರೂ.185.00 ಲಕ್ಷಗಳು ಮತ್ತು (ಕೇಂದ್ರ ಪಾಲು ತಲಾ ರೂ.10.00 ಲಕ್ಷಗಳಂತೆ) | (ಜಿಲ್ಲಾ ಪಂಚಾಯತ್ ಮಟ್ಟದಲ್ಲಿ ಕಾರ್ಯಕ್ರಮವನ್ನು ಅನುಷ್ಠಾನ ಗೊಳಿಸುವುದಕ್ಕಾಗಿ ಹಾಲಿ ತಾಲ್ಲೂಕು ಪಂಚಾಯತ್‌ನ ಸಗ್ರಾಇ ಂಕಾ ಕಾರ್ಯಕ್ರಮದಲ್ಲಿ ಲಭ್ಯವಿರುವ ಹುದ್ದೆಗಳನ್ನು ಜಿಲ್ಲಾ ಪಂಚಾಯತ್‌ಗೆ ವರ್ಗಾಯಿಸಿದೆ. |

3. ವೇತನ ಮತ್ತಿತರ ಭತ್ಯೆಗಳನ್ನು ಸಂಪ್ರದಾಯವಲ್ಲದ ಇ ಂಧನ ಮೂಲಗಳ ಮಂತ್ರಾಲಯ, ನವದೆಹಲಿ ರವರ ಆಡಳಿತಾತ್ಮಕ ಮಂಜೂರಾತಿ ದಿನಾಂಕದಲ್ಲಿ ಸೂಚಿಸಲಾದಂತೆ ಭರಿಸುವುದು.

4. ತಾಲ್ಲೂಕು ಪಂಚಾಯತ್‌ನಲ್ಲಿ ಲಭ್ಯವಿರುವ ಹಾಲಿ ಹುದ್ದೆಗಳನ್ನು ಜಿಲ್ಲಾ ಪಂಚಾಯತ್‌ಗೆ ವರ್ಗಾಯಿಸಿಕೊಂಡು ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವುದು ಹಾಗೂ ವೇತನವನ್ನು ಈಗ ಪಡೆಯುತ್ತಿರುವ ಲೆಕ್ಕ ಶೀರ್ಷಿಕೆಯಡಿಯೇ ಭರಿಸುವುದು. ಒಂದು ವೇಳೆ ಯೋಜನಾಧಿಕಾರಿಗಳು ಒಂದು ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಒಂದಕ್ಕಿಂತ ಹೆಚ್ಚಿಗೆ ಇ ದ್ದಲ್ಲಿ ಖಾಲಿ ಇ ರುವ ಜಿಲ್ಲಾ ಪಂಚಾಯತ್‌ಗೆ ವರ್ಗಾಯಿಸಲು ಅಧಿಕಾರ ನೀಡಿದೆ.

5. ಈ ಆದೇಶ ಹೊರಡಿಸಲು ಇ ಲಾಖೆಯ ಅಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅವರ ಟಿಪ್ಪಣಿ ಸಂಖ್ಯೆ ಗ್ರಾಅಪ 191 ಪಿಬಿಎಸ್ 04 ದಿನಾಂಕ 14.06.2004ರಲ್ಲಿ ಪಡೆಯಲಾಗಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎನ್.ವಿಜಯ ಪ್ರಕಾಶ್**

ನಿರ್ದೇಶಕರು(ಗ್ರಾಇ ಂಕಾ) ಹಾಗೂ

ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,

ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ

ಅನುಬಂಧ-II

ಸರ್ಕಾರಿ ಆದೇಶ ಸಂಖ್ಯೆ 18 ಗ್ರಾಅಪ 2004, ಬೆಂಗಳೂರು, ದಿನಾಂಕ 17.06.2004

ಅ) ರಾಜ್ಯ ಘಟಕದ ಹುದ್ದೆಗಳು :

| ಕ್ರ.ಸಂ | ಸೃಜಿಸಲಾದ ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಯೋಜನಾ ನಿರ್ದೇಶಕರು | 9580-14200 | ಒಂದು |
| 2 | ಲೆಕ್ಕ ಅಧೀಕ್ಷಕರು | 5575-10620 | ಒಂದು |
| 3 | ಶೀಘ್ರಲಿಪಿಗಾರರು | 3850-7050 ವಿ.ಭ.75/- | ಒಂದು |
| 4 | ಬೆರಳಚ್ಚುಗಾರರು ಕಂ ಕ್ಲರ್ಕ್ | 3000-5450 ವಿ.ಭ.60/- | ಒಂದು |
| 5 | ಗ್ರೂಪ್ ಡಿ ನೌಕರರು | 2600-4350 | ಒಂದು |

ಆ) ಜಿಲ್ಲಾವಾರು ಹುದ್ದೆಗಳು :

| ಕ್ರ.ಸಂ. | ಸೃಜಿಸಲಾದ ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ಹುದ್ದೆಗಳ ಸಂಖ್ಯೆ |
|---|---|---|---|
| 1 | ಯೋಜನಾಧಿಕಾರಿಗಳು | 6000-11200 | ಒಂದು |
| 2 | ಕಿರಿಯ ಅಭಿಯಂತರರು | 4575-8400 | ಒಂದು |
| 3 | ಬೆರಳಚ್ಚುಗಾರರು ಕಂ ಕ್ಲರ್ಕ್ | 3000-5450 ವಿ.ಭ.60/- | ಒಂದು |
| 4 | ವಾಹನ ಚಾಲಕ (ಬೆಂಗಳೂರು ಉತ್ತರ ತಾಲ್ಲೂಕಿಗೆ ಮಾತ್ರ) | 3000-5450 ವಿ.ಭ.60/- | ಒಂದು |

**ಕೆ.ಎನ್. ವಿಜಯ ಪ್ರಕಾಶ್**
ನಿರ್ದೇಶಕರು (ಗ್ರಾಇ ೦ಕಾ) ಹಾಗೂ
ಪಿ.ಆರ್. 669 ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇ ಲಾಖೆ.

**ಕಂದಾಯ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಕಂಇ 193 ಮುನೋಮು 2004, ಬೆಂಗಳೂರು, ದಿನಾಂಕ: 19ನೇ ಜೂನ್ 2004**

ಸರ್ಕಾರಿ ಆದೇಶ ಸಂಖ್ಯೆ: ಕಂಇ 315 ಮುನೋಮು 2003, ದಿನಾಂಕ: 3.10.2003 ರ ಆದೇಶದ 5ನೇ ಸಾಲಿನಲ್ಲಿರುವ "ಪ್ರತಿ ಸಾವಿರ ರೂಪಾಯಿಗಳಿಗೆ ರೂ. 1.00 ರಂತೆ" ಎಂಬುದಕ್ಕೆ ಬದಲಾಗಿ "ಶೇ 50 ರಂತೆ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

**ಡಿ.ಎನ್. ಶ್ರೀಮುಖಿ**
ಪಿ.ಆರ್. 670 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ನೋಂದಣಿ ಮತ್ತು ಮುದ್ರಾಂಕ)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ವಾಕೈ 12 ಜಜನಿ 1999, ಬೆಂಗಳೂರು, ದಿನಾಂಕ: 8ನೇ ಜೂನ್ 2004**

ಸರ್ಕಾರಿ ಆದೇಶ ಸಂಖ್ಯೆ: ವಾಕೈ 12 ಜಜನಿ 1999 ದಿನಾಂಕ: 23.1.2004 ರ 8 ಹಾಗೂ 9ನೇ ಸಾಲುಗಳಲ್ಲಿ "ಕೇಂದ್ರ ಕಛೇರಿಯು ಹುಬ್ಬಳ್ಳಿಯಾಗಿರಬೇಕಾಗಿದ್ದು" ಎಂಬುದನ್ನು "ಕಛೇರಿಯು ಧಾರವಾಡದಲ್ಲಿರಬೇಕಾಗಿದ್ದು" ಎಂಬುದಾಗಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 671 **ಕೆ.ಎಂ. ವೀರಯ್ಯ**
ಪೀಠಾಧಿಕಾರಿ (ಜವಳಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಇಡಿ 01 ಯುಆರ್‌ಸಿ 2003, ಬೆಂಗಳೂರು, ದಿನಾಂಕ: 22ನೇ ಜೂನ್ 2004**

2003-2004ನೇ ಸಾಲಿಗೆ ಶಿಕ್ಷಣ ಕಾಲೇಜುಗಳ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಿರುವ ದಿನಾಂಕ: 6.5.2004 ಸಂಖ್ಯೆ ಇಡಿ 1 ಯುಆರ್‌ಸಿ 2003ರ ಸರ್ಕಾರಿ ಆದೇಶದ ಅನುಬಂಧದಲ್ಲಿ ಕೋಲಾರ ಜಿಲ್ಲೆಯಡಿಯಲ್ಲಿ ಕ್ರಮ ಸಂಖ್ಯೆ: 15 ರಲ್ಲಿರುವ ಗೋಲ್ಡ್ ಫೀಲ್ಡ್ ಕಾಲೇಜ್ ಆಫ್ ಎಜುಕೇಷನ್, ಬಂಗಾರಪೇಟೆ ಎದುರು ಷರಾ ಕಾಲಂನಲ್ಲಿ "ಎನ್.ಸಿ.ಟಿ.ಇ.ಯ ಮಾನ್ಯತೆ ಸ್ವೀಕೃತವಾಗಿಲ್ಲವಾದ್ದರಿಂದ ವಿದ್ಯಾರ್ಥಿಗಳ ಪ್ರವೇಶ ಮಾಡತಕ್ಕದ್ದಲ್ಲ" ಎಂಬ ಷರಾವನ್ನು ಕೈಬಿಡಲಾಗಿದೆ; ಎನ್.ಸಿ.ಟಿ.ಇ. ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ ಕಾಲಂನಲ್ಲಿ ಗೋಲ್ಡ್ ಫೀಲ್ಡ್ ಕಾಲೇಜ್ ಆಫ್ ಎಜುಕೇಷನ್, ಬಂಗಾರಪೇಟೆಯ ವಿದ್ಯಾರ್ಥಿ ಪ್ರಮಾಣವನ್ನು "100" ಎಂದು ಸೇರ್ಪಡೆಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 672 **ಸುಂದರ ರಾಜ ಗುಪ್ತ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## FINANCE SECRETARIAT

**Sub:** Delegation of enhanced financial powers to the Watershed Development Department –reg.

**Read:** 1)G.O.No.FD 1 TFP 2001 dtd.2.2.2001.

2) Letter No. ಜಿ.ಆ.ಇ. ಆಡಳಿತ–1:ವಿನಿ–1:10:2003–04 ದಿನಾಂಕ: 25.06.2003.

**PREAMBLE:**

Enhanced delegation of financial powers were issued to the Watershed Development Department, other Heads of Departments and District-level officers of Watershed Development Department vide Government Orders read above. The limits fixed in these orders relating to the Watershed Development Department need to be revised in view of the increase in prices, need to avoid delay and to ensure efficient functioning of the Department. In the circumstances, the Commissioner of Watershed Development Department has requested orders of Government to delegate enhanced financial powers to the various of the Watershed Development Department.

**ORDER NO.FD 06 TFP 2004, BANGALORE DATED: 24th May 2004**

The proposal of the Commissioner of Watershed Development Department has been considered in detail and in modification of Government Order read above, sanction is accorded to the delegation of enhanced financial powers to the Commissioner of Watershed Development Department, Bangalore, and other Heads of Department and District-Level officers of Watershed Development Department, as indicated in the Annexure appended to this order.

By Order and in the name of the Governor of Karnataka

**AMLAN ADITYA BISWAS**

Deputy Secretary to Government(B&R)

Finance Department.

**GOVERNMENT ORDER NO.FD 06 TFP 2004 DATED 24th MAY 2004**

**ANNEXURE**

**SPECIAL ADMINISTRATIVE/FINANCIAL POWERS DELEGATED TO VARIOUS OFFICERS OF WATERSHED DEVELOPMENT DEPARTMENT**

| Sl. No. | Name of the Powers | Commissioner | | Director | | Addl. Director of Agril. | | Conservator of Forests | | Addl./Joint Director (Admn.) | | Joint Directors in WDD (H/O)/ Live- stock specialist | | District Watershed Dev. Officers in Dist/ Principal, WTC | | Asst. Director of Agril/Hortil/Asst. Conservator of Forests | | WaterShed Development Team | | Justification for revision | F.D's Remarks |
|---|---|---|---|---|---|---|---|---|---|---|---|---|---|---|---|---|---|---|---|---|---|
| | | Existing | Proposed | Existing | Proposed | Existing | Proposed | Existing | Proposed | Existing | Proposed | Existing | Proposed | Proposed | Revised | Proposed | Revised | Proposed | Revised | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| 1. | **FINANCIAL:** To sanction the deputation of GAZ/NON-GAZ officers for Training/ Study tour inside/ outside the State, within India | - - | Full powers GAZ/ NGOs | - - | Full powers GAZ/ NGOs | - - | - - | - - | - - | - - | FuAll powers in respect of NGO's within the State/ Outside the State | - - | - - | - - | Upto 15 days (NGO's) within the State | - - | - - | - - | - - | The powers shown as existing powers are exercised in the respective line departments. As these powers are inadequate for nature of works carried out in Watershed Development Department and to bring to a common pattern of powers among all the officers of different disciplines the sanction of revised powers are sought for. | May be agreed to subject to Economy Orders. |

| Sl. No. | Name of the Powers | Commissioner | | Director | | Addl. Director of Agril. | | Conservator of Forests | | Addl./Joint Director (Admn.) | | Joint Directors in WDD (H/O)/ Live- stock specialist | | District Watershed Dev. Officers in Dist/ Principal, WTC | | Asst. Director of Agril/Hortil/Asst. Conservator of Forests | | WaterShed Development Team | | Justification for revision | F.D's Remarks |
|---|---|---|---|---|---|---|---|---|---|---|---|---|---|---|---|---|---|---|---|---|---|
| | | Existing | Proposed | Existing | Proposed | Existing | Proposed | Existing | Proposed | Existing | Proposed | Existing | Proposed | Proposed | Revised | Proposed | Revised | Proposed | Revised | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| 2. | To rationalize and redeploys 'C' & 'D' group posts within the Dept. | - - | Full Powers | - - | - - | - - | - - | - - | - - | - - | - - | - - | - - | - - | - - | - - | - - | - - | - - | | -As above- |
| **TECHNICAL SANCTIONS:** | | | | | | | | | | | | | | | | | | | | | |
| 3. | a) Watershed – Soil conservation works/ Programmes | Full powers | Full powers | Full powers | Full powers | 30.00 | 30.00 | - - | - - | - - | - - | 10.00 | 10.00 | 2.00 | -- | 1.00 | 1.00 | - - | 0.25 | | |
| | b) Watershed – Forest works/ Programmes | Full powers | Full powers | Full powers | Full powers | - - | - - | - - | 30.00 | - - | - - | - - | - - | 2.00- | -- | 1.00 | 1.00 | - - | 0.25 | | |
| | c)Watershed – Horticulture works/ Programmes | Full powers | Full powers | Full powers | Full powers | - - | - - | - - | - - | - - | - - | - - | 10.00 | 2.00 | -- | 1.00 | 1.00 | - - | 0.25 | | |
| | d) Watershed – Live-stock Programmes | Full powers | Full powers | Full powers | Full powers | - - | - - | - - | - - | - - | - - | - - | 10.00 | 2.00 | -- | 0.50 | 1.00 | - - | 0.25 | | |
| **SANCTION OF ESTIMATE** | | | | | | | | | | | | | | | | | | | | | |
| 4. | a) Soil conservation | Full powers | Full powers | Full powers | Full powers | 10.00 | 10.00 | - - | - - | - - | - - | 5.00 | 5.00 | 2.00 | -- | 1.00 | 1.00 | - - | 0.25 | | |
| | b) Forest | Full powers | Full powers | Full powers | Full powers | - - | - - | 10.00 | 10.00 | - - | - - | - - | - - | 2.00 | -- | 1.00 | 1.00 | - - | 0.25 | | |
| | c) Horticulture | Full powers | Full powers | Full powers | Full powers | - - | - - | - - | - - | - - | - - | 5.00 | 5.00 | 2.00 | -- | 1.00 | 1.00 | - - | 0.25 | | |
| | d) Livestock | Full powers | Full powers | Full powers | Full powers | - - | - - | - - | - - | - - | - - | - - | 5.00 | 2.00 | -- | 1.00 | 1.00 | - - | 0.25 | | |
| **II. PURCHASES:** To sanction subject to Transparency in procurement Rules; II- Purchase of: | | | | | | | | | | | | | | | | | | | | | |
| 5. | a) Equipments such as utensils, crockery & other items required for Guest House/Govt. Hostels/Trg. Centers etc. | - - | Full Powers | - - | - - | - - | - - | - - | - - | - - | Rs. 10000 per annum | - - | - - | - - | Rs. 1000 each time | - - | - - | - - | - - | | |
| | b) Crockery for office use | - - | Full Powers | - - | - - | - - | - - | - - | - - | - - | Rs. 1000 per annum | - - | - - | - - | Rs. 500 per annum | - - | - - | - - | - - | | |

| Sl. No. | Name of the Powers | Commissioner | | Director | | Addl. Director of Agril. | | Conservator of Forests | | Addl./Joint Director (Admn.) | | Joint Directors in WDD (H/O)/ Live- stock specialist | | District Watershed Dev. Officers in Dist/ Principal, WTC | | Asst. Director of Agril/Hortil/Asst. Conservator of Forests | | WaterShed Development Team | | Justification for revision | F.D's Remarks |
|---|---|---|---|---|---|---|---|---|---|---|---|---|---|---|---|---|---|---|---|---|---|
| | | Existing | Proposed | Existing | Proposed | Existing | Proposed | Existing | Proposed | Existing | Proposed | Existing | Proposed | Proposed | Revised | Proposed | Revised | Proposed | Revised | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| | c) Scientific instruments & survey instruments of WDD | - - | Full Powers | - - | - - | - - | - - | - - | - - | - - | - - | - - | - - | - - | Rs. 25000 each time | - - | Rs. 15000 each time | - - | - - | | |
| | d) Plants, seedlings, seeds, manure, fertilizers, insecticides, weed lings, medicines, gunny bags, cartridges and other miscellaneous consumable articles for use in the Dept. | - - | Full Powers | - - | - - | - - | Full Powers | - - | Full Powers | - - | - - | - - | - - | - - | Rs. 25000 each time | - - | Rs. 15000 each time | - - | - - | | |
| | e) Stationary for office required for immediate use when not supplied by the Director of Printing & Stationery | - - | Full Powers | - - | - - | - - | - - | - - | - - | - - | Rs. 2000 p.a. | - - | - - | - - | Rs. 1000 per annum | - - | Rs. 500 per annum | - - | -- | | |
| 6. | Sanction for purchase of TV, VCP, Cameras, Screens | - - | Full Powers | - - | - - | - - | - - | - - | - - | - - | Rs. 10000 each time & Rs. 100000 p.a. | - - | - - | - - | Rs. 10000 each case & limited to Rs. 50,000 per annum | - - | - - | - - | - - | | Rejected- No powers. |
| 7. | a) Production of films on success story of watershed development programmes | - - | Full Powers | - - | - - | - - | - - | - - | - - | - - | Rs. 1000000 each time & Rs. 100000 pa | - - | - - | - - | Rs. 25000 each case & limited to Rs. 50000 per annum | -- | -- | - - | - - | | Rejected- No powers. |
| | b) Purchase of accessories to existing equipments, repairs to audio equipments TV, VCP, VCR, Slide, VCD, DVD all types of projectors etc. | - - | Rs. 25.000 p.a. | - - | - - | - - | - - | - - | - - | - - | Rs. 5000 per annum | - - | - - | - - | Rs. 500 p.a. | - - | No Powers | - - | -- | | Rejected- No powers. |
| 8. | To sanction expenditure on purchase & preparation of charts and models | - - | Full Powers | - - | - - | - - | - - | - - | - - | - - | - - | - - | - - | - - | Rs. 5000each time | - - | Rs. 1000 each time | - - | -- | | |

| Sl. No. | Name of the Powers | Commissioner | | Director | | Addl. Director of Agril. | | Conservator of Forests | | Addl./Joint Director (Admn.) | | Joint Directors in WDD (H/O)/ Live- stock specialist | | District Watershed Dev. Officers in Dist/ Principal, WTC | | Asst. Director of Agril/Hortil/Asst. Conservator of Forests | | WaterShed Development Team | | Justification for revision | F.D's Remarks |
|---|---|---|---|---|---|---|---|---|---|---|---|---|---|---|---|---|---|---|---|---|---|
| | | Existing | Proposed | Existing | Proposed | Existing | Proposed | Existing | Proposed | Existing | Proposed | Existing | Proposed | Proposed | Revised | Proposed | Revised | Proposed | Revised | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| 9. | To incur expenditure for organizing exhibition | - - | Full Powers | - - | - - | - - | - - | - - | - - | - - | - - | - - | - - | - - | Rs. 10000 each time | - - | Rs. 5000 each time | - - | -- | | Rejected- No powers. |
| 10. | To sanction purchase of 35mm film/strips slides | - - | Full Powers | - - | - - | - - | - - | - - | - - | - - | Rs. 10000 each time | - - | - - | - - | Rs. 5000 each time | - - | Rs. 3000 each time | - - | -- | | |
| 11. | To sanction developing & printing photos | - - | Full Powers | - - | - - | - - | - - | - - | - - | - - | - - | - - | - - | - - | Rs. 10000 p.a. time | - - | Rs. 5000 per annum | - - | -- | | |
| 12. | Repairs of apparatus, machinery & scientific instruments etc. | - - | Full Powers | - - | - - | - - | - - | - - | - - | - - | Rs. 5,000 each time | - - | - - | - - | Rs. 2,000 each time | - - | Rs. 500 each time | - - | -- | | Rejected- No powers. |
| 13. | To sanction and payment of printing & publication of hand books, leaflets, literature etc. by calling quotation without intervention of Director of Printing and Stationery | - - | Full Powers | - - | - - | - - | - - | - - | - - | - - | Rs. 50,000 each time | - - | - - | - - | Rs. 10,000 each time & Rs. 50,000 per annum | - - | Rs. 5,000 each time & Rs. 25,000 per annum | - - | -- | | Rejected- No powers. |
| 14. | To sanction expenditure on binding works done locally without referring to Govt. Press | - - | Full Powers | - - | - - | - - | - - | - - | - - | - - | Full Powers | - - | - - | - - | Rs. 15,000 each time | - - | Rs. 3,000 each time | - - | -- | | |
| 15. | **DEMONSTRATIONS:** Conducted tours (at the rates fixed by the Commissioner, WDD) | - - | - - | - - | - - | - - | - - | - - | - - | - - | - - | - - | - - | - - | - | - - | Full powers limited to Budget provision | - - | -- | | |
| 16. | To` sanction charges for pvt. Lorries hired for the purpose of urgent transportation provided the sanctioned rates are not in excess of scheduled rates | - - | Full Powers | - - | - - | - - | - - | - - | - - | - - | - - | - - | - - | - - | Rs. 10,000 each time | - - | Rs. 5,000 each time | - - | -- | | |

| Sl. No. | Name of the Powers | Commissioner | | Director | | Addl. Director of Agril. | | Conservator of Forests | | Addl./Joint Director (Admn.) | | Joint Directors in WDD (H/O)/ Live- stock specialist | | District Watershed Dev. Officers in Dist/ Principal, WTC | | Asst. Director of Agril/Hortil/Asst. Conservator of Forests | | WaterShed Development Team | | Justification for revision | F.D's Remarks |
|---|---|---|---|---|---|---|---|---|---|---|---|---|---|---|---|---|---|---|---|---|---|
| | | Existing | Proposed | Existing | Proposed | Existing | Proposed | Existing | Proposed | Existing | Proposed | Existing | Proposed | Proposed | Revised | Proposed | Revised | Proposed | Revised | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 |
| 17. | Purchase of card boards frames, glasses for charts and maps etc. | - - | Full Powers | - - | - - | - - | - - | - - | - - | - - | - - | - - | - - | - - | Rs. 2,000 per annum | - - | Rs. 500 per annum | - - | -- | | Rejected- No powers. |
| 18. | To sanction production of visual aids etc. to pvt. Firms for publicity and propaganda to educate farmers | - - | Full Powers | - - | - - | - - | - - | - - | - - | - - | - - | - - | - - | - - | Rs. 15,000 each time | - - | Rs. 5,000 each time | - - | -- | | |
| 19. | Purchase of Service stamps | - - | Full Powers | - - | - - | - - | - - | - - | - - | - - | - - | - - | - - | - - | Rs. 2,000 each time | - - | Rs.500 each time | - - | -- | | |
| 20. | To sanction miscellaneous expenditure | - - | 10,000 p.a. | - - | - - | - - | - - | - - | - - | - - | Rs. 5000 p.a | - - | - - | - - | Rs. 500 each time subject to Rs. 2,000 p.a. | - - | Rs.200 each time subject to Rs.1,000 p.a. | - - | -- | | Rejected- No powers. |
| 21. | To hire Audio-visual equipments, films, film charts, graphics, transparencies, electrical appliances generators etc. | - - | Full Powers | - - | - - | - - | - - | - - | - - | - - | Rs. 5,000 each time or Rs. 50,000 per annum | - - | - - | - - | Rs. 2,500 each time Rs. 25,000 per annum | - - | Rs. 1,000 each time or Rs. 5,000 per annum | - - | -- | | Rejected No Power should be covered by miscellaneous expenditure |
| 22. | To hire pvt .Vehicles locally by calling quotations | - - | Full Powers | - - | - - | - - | - - | - - | - - | - - | - - | - - | - - | | | - - | -- | - - | -- | | Rejected- No powers. |
| 23. | To purchase fax, Xerox machines, Resograph, Duplicating machines, photo copier etc. & other office equipments | - - | Full Powers | - - | - - | - - | - - | - - | - - | - - | - - | - - | - - | - - | -- | - - | -- | - - | -- | | Rejected- No powers-Economy orders apply. |
| 24. | Annual Maintenance Contract and repairs of office equipments and vehicles | - - | Full Powers | - - | - - | - - | - - | - - | - - | - - | Rs. 25,000 each time | - - | - - | - - | Rs. 10,000 per annum | - - | -- | - - | -- | | Rejected- No powers. |

PR-636

**AMLAN ADITYA BISWAS**
Deputy Secretary to Government(B&R)
Finance Department.